*RNI No. KARBIL/2001/47147*

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

**ವಿಶೇಷ ರಾಜ್ಯ ಪತ್ರಿಕೆ**



| ಭಾಗ– I | ಬೆಂಗಳೂರು, ಬುಧವಾರ, ಅಕ್ಟೋಬರ್ ೧೪, ೨೦೧೫ (ಆಶ್ವಯುಜ ೨೨, ಶಕ ವರ್ಷ ೧೯೩೭) | ನಂ. ೧೧೦೮ |
|---|---|---|
| ***Part–I*** | ***Bengaluru, Wednesday, October 14, 2015 (Aashwayuja 22, Shaka Varsha 1937)*** | ***No. 1108*** |



**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ಕರ್ನಾಟಕ ಸರ್ಕಾರದ ನಡವಳಿಗಳು**

**ವಿಷಯ:** ನವದೆಹಲಿಯ ಕರ್ನಾಟಕ ಭವನದಲ್ಲಿನ ಊಟೋಪಚಾರದ ದರಗಳನ್ನು ಪರಿಷ್ಕರಿಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 38 ಹೆಚ್ಎಂಬಿ 1999 ದಿನಾಂಕ:31.05.2000
2) ನಿವಾಸಿ ಆಯುಕ್ತರ ಕಛೇರಿಯ ಪತ್ರ ಸಂಖ್ಯೆ:ಕಭ/ಲೆ & ಉ/ಊ.ದ.ಪ./2015 ದಿನಾಂಕ: 01.08.2015
3) ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಆಇ 638 ವೆಚ್ಚ–12/2015 ದಿನಾಂಕ:28.09.2015

**ಪ್ರಸ್ತಾವನೆ:**

ನವದೆಹಲಿಯ ಕರ್ನಾಟಕ ಭವನದಲ್ಲಿನ ಊಟೋಪಚಾರಗಳ ದರಗಳನ್ನು ಉಲ್ಲೇಖಿತ (1)ರ ಸರ್ಕಾರಿ ಆದೇಶದಂತೆ 15 ವರ್ಷಗಳ ಹಿಂದೆ ದರಗಳನ್ನು ನಿಗದಿಪಡಿಸಲಾಗಿತ್ತು. ಆದರೆ ಊಟೋಪಚಾರಗಳ ನಿರ್ವಹಣಾ ವೆಚ್ಚ ಗಣನೀಯವಾಗಿ ಹೆಚ್ಚಿರುವುದರಿಂದ ದರಗಳನ್ನು ಪರಿಷ್ಕರಿಸಲು ಅಗತ್ಯ ಪ್ರಸ್ತಾವನೆಯನ್ನು ಸಲ್ಲಿಸುವಂತೆ ನಿವಾಸಿ ಆಯುಕ್ತರು, ಕರ್ನಾಟಕ ಭವನರವರನ್ನು ಕೋರಲಾಗಿತ್ತು. ನಿವಾಸಿ ಆಯುಕ್ತರು, ಕರ್ನಾಟಕ ಭವನರವರು ಉಲ್ಲೇಖಿತ (2)ರ ಪತ್ರದಲ್ಲಿ ಅನುಬಂಧ ಸಹಿತ ಪರಿಷ್ಕರಿಸಬಹುದಾದ ದರಗಳನ್ನು ತಿಳಿಸಿರುತ್ತಾರೆ. ಈ ದರಗಳನ್ನು ಸರ್ಕಾರದ ಹಂತದಲ್ಲಿ ಪರಿಶೀಲಿಸಲಾಗಿದೆ. ಈ ಬಗ್ಗೆ ಆರ್ಥಿಕ ಇಲಾಖೆಯ ಅಭಿಪ್ರಾಯವನ್ನು ಕೋರಲಾಗಿ ಆರ್ಥಿಕ ಇಲಾಖೆಯು ಉಲ್ಲೇಖ (3)ರ ಟಿಪ್ಪಣಿಯಲ್ಲಿ ದರಗಳನ್ನು ಪರಿಷ್ಕರಿಸಲು ಸಹಮತಿ ವ್ಯಕ್ತಪಡಿಸಿರುತ್ತಾರೆ. ಆದುದರಿಂದ ಪ್ರಸ್ತಾವನೆಯನ್ನು ಕೂಲಕಂಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**<u>ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 70 ಹೆಚ್ಎಂಬಿ 2015</u>**

**ಬೆಂಗಳೂರು ದಿನಾಂಕ: 13/10/2015**

ಮೇಲೆ ತಿಳಿಸಿರುವ ಅಂಶಗಳ ಹಿನ್ನೆಲೆಯಲ್ಲಿ ನವದೆಹಲಿಯ, ಕರ್ನಾಟಕ ಭವನದಲ್ಲಿನ ಊಟೋಪಚಾರಗಳ ದರಗಳನ್ನು ಈ ಆದೇಶ ಹೊರಡಿಸಿದ ದಿನದಿಂದ ಜಾರಿಗೆ ಬರುವಂತೆ, ಈ ಆದೇಶದ ಅನುಬಂಧ–1ರಲ್ಲಿ ಲಗತ್ತಿಸಿರುವ ಪಟ್ಟಿಯಂತೆ ದರಗಳನ್ನು ಪರಿಷ್ಕರಿಸಿ ಆದೇಶಿಸಲಾಗಿದೆ.

**ಜಯವಿಭವ ಸ್ವಾಮಿ**
ಉಪ ಕಾರ್ಯದರ್ಶಿ(ರಾಜ್ಯ ಶಿಷ್ಟಾಚಾರ)
ಸಿಆಸು ಇಲಾಖೆ

**ಆದೇಶ ಸಂಖ್ಯೆ: ಸಿಆಸುಇ 70 ಹೆಚ್‌ಎಂಬಿ 2015 ದಿನಾಂಕ: 13/10/2015**
**ಕರ್ನಾಟಕ ಭವನದಲ್ಲಿನ ಊಟೋಪಚಾರದ ದರಗಳು**
**ಅನುಬಂಧ–1**

| Sl.No | Items | Category 1-7 | Category 8-11 | Karnataka Bhavan Staff |
|---|---|---|---|---|
| | | Charging Rates per Item (in Rupees) | Charging Rates per Item (in Rupees) | Charging Rates per Item (in Rupees) |
| 01 | Coffee/Tea/Milk/Majige/ Lassi/Lemon Juice | 06.00 | 14.00 | 03.00 |
| 02 | Break fast (Vegetarian) | 25.00 | 70.00 | 12.50 |
| 03 | Break fast (Non-Vegetarian) | 30.00 | 80.00 | -- |
| 04 | Bread toasts (4 Pieces) | 12.00 | 30.00 | -- |
| 05 | Lunch | 30.00 | 100.00 | 15.00 |
| 06 | Dinner | 35.00 | 120.00 | 17.50 |
| 07 | Chicken/Mutton (1 Plate) | 50.00 | 130.00 | --- |
| 08 | Fish Surmai | 70.00 | 200.00 | --- |
| 09 | Fish Pompret | 100.00 | 300.00 | --- |

**ಜಯವಿಭವ ಸ್ವಾಮಿ**
ಉಪ ಕಾರ್ಯದರ್ಶಿ(ರಾಜ್ಯ ಶಿಷ್ಟಾಚಾರ)
ಸಿಆಸು ಇಲಾಖೆ

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ8) 100 ಪ್ರತಿಗಳು)

*RNI No. KARBIL/2001/47147*

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

## ವಿಶೇಷ ರಾಜ್ಯ ಪತ್ರಿಕೆ

| ಭಾಗ– *I* | ಬೆಂಗಳೂರು, ಶುಕ್ರವಾರ, ಅಕ್ಟೋಬರ್ ೧೬, ೨೦೧೫ (ಆಶ್ವಯುಜ ೨೪, ಶಕ ವರ್ಷ ೧೯೩೭) | ನಂ. ೧೧೧೫ |
|---|---|---|
| ***Part–I*** | ***Bengaluru, Friday, October 16, 2015 (Aashwayuja 24, Shaka Varsha 1937)*** | ***No. 1115*** |


**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ಸುತ್ತೋಲೆ**

**ಸಂಖ್ಯೆ: ಸಿಆಸುಇ 279 ಶಿವಾನೀ 2015, ಬೆಂಗಳೂರು, ದಿನಾಂಕ: 14.10.2015**

**ವಿಷಯ:** ಮಾನ್ಯ ಸಚಿವರು ಹಾಗೂ ಇತರೆ ವಿ.ಐ.ಪಿ. ವಾಹನಗಳಿಗೆ ಹೆಚ್ಚುವರಿ ಉಪಕರಣಗಳನ್ನು ಅಳವಡಿಸುವ ಕುರಿತು.

**ಉಲ್ಲೇಖ:** (1) ಅಧಿಕೃತ ಜ್ಞಾಪನ ಸಂಖ್ಯೆ: ಸಿಆಸುಇ 138 ಶಿವಾನೀ 94, ದಿನಾಂಕ: 06.06.1994.

(2) ಸುತ್ತೋಲೆ ಸಂಖ್ಯೆ: ಸಿಆಸುಇ 142 ಶಿವಾನೀ 2012, ದಿನಾಂಕ: 21.12.2012.

---------

ಮೇಲಿನ ವಿಷಯಕ್ಕೆ ಸಂಬಂಧಿಸಿದಂತೆ, ಉಲ್ಲೇಖ (1) ಮತ್ತು (2)ರ ಅಧಿಕೃತ ಜ್ಞಾಪನ ಮತ್ತು ಸುತ್ತೋಲೆಯನ್ನು ಹಿಂಪಡೆಯಲಾಗಿದೆ. ರಾಜ್ಯ ಅತಿಥ್ಯ ಸಂಸ್ಥೆಯ ಸುಪರ್ದಿಗೆ ಒಳಪಡುವ ವಾಹನಗಳಿಗೆ ಸಂಬಂಧಿಸಿದಂತೆ, ಈ ಕೆಳಕಂಡ ಹೆಚ್ಚುವರಿ ಉಪಕರಣಗಳನ್ನು ಅಳವಡಿಸಬಹುದಾಗಿದೆ.

| ಗಣ್ಯ ವ್ಯಕ್ತಿಗಳ ಉಪಯೋಗಕ್ಕಾಗಿ ಖರೀದಿಸುವ ವಾಹನಗಳಿಗೆ ಅಳವಡಿಸಬೇಕಾದ ಉಪಕರಣಗಳು | ಗಣ್ಯ ವ್ಯಕ್ತಿಗಳ ಉಪಯೋಗಕ್ಕಾಗಿ ಖರೀದಿಸುವ ವಾಹನಗಳಿಗೆ ಅಳವಡಿಸಬಹುದಾದ ಉಪಕರಣಗಳು |
|---|---|
| 1) Number plate with letter & Logo.<br>2) Red light Top<br>3) Flag Rod with cover<br>4) Reading Light<br>5) Horn with Cut out<br>6) Rubber foot mat or K II – Fiber Mat (any one of them)<br>7) Rubber Floor mat | 1) Amplifier with speaker (siren)<br>2) Marble/Wooden Bead Seats<br>3) Mobile Charger<br>4) Front crash guard<br>5) Rear crash guard<br>6) Rear Spoiler<br>7) Door Visors (for rain water protection)<br>8) Side foot rest<br>9) Cloth seat covers only |

ಮೇಲಿನ ಎರಡು ಕೋಷ್ಟಕಗಳಲ್ಲಿ ತಿಳಿಸಿರುವಂತೆ, ಮೊದಲನೆ ಕೋಷ್ಟಕದಲ್ಲಿ ತಿಳಿಸಿರುವ ಉಪಕರಣಗಳನ್ನು ಅಗತ್ಯವಾಗಿ ಅಳವಡಿಸುವುದು. ನಂತರ ಉಳಿದ ಮೊತ್ತದಲ್ಲಿ ಎರಡನೆ ಕೋಷ್ಟಕದಲ್ಲಿ ತಿಳಿಸಿರುವ ಉಪಕರಣಗಳನ್ನು ಅವಶ್ಯಕತೆಯಿದ್ದಲ್ಲಿ ಮಾತ್ರ ಅಳವಡಿಸಬಹುದು. ಎರಡು ಪಟ್ಟಿಯಲ್ಲಿನ ಉಪಕರಣಗಳು ಸೇರಿ ಗರಿಷ್ಠ ಮಿತಿ ₹1.00 ಲಕ್ಷಗಳಿಗೆ ನಿಗಧಿಪಡಿಸಲಾಗಿದೆ. ಹೊಸ ವಾಹನಗಳಿಗೆ ಹೆಚ್ಚುವರಿ ಉಪಕರಣಗಳನ್ನು ಖರೀದಿಸಲು ರಾಜ್ಯ ಅತಿಥ್ಯ ಸಂಸ್ಥೆಯ ನಿರ್ದೇಶಕರ ಅನುಮೋದನೆಯೊಂದಿಗೆ ಕುಮಾರ ಕೃಪ ಅತಿಥಿ ಗೃಹದ ವಿಶೇಷಾಧಿಕಾರಿಗಳು ಕ್ರಮವಹಿಸತಕ್ಕದೆಂದು ತಿಳಿಸಲು ನಾನು ನಿರ್ದೇಶಿತನಾಗಿದ್ದೇನೆ.

**ಎಸ್. ನಾಗರಾಜಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ–2
ಸಿ. & ಆ.ಸು.ಇ. (ರಾಜ್ಯ ಶಿಷ್ಟಾಚಾರ)

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ೮) ೧೦೦ ಪ್ರತಿಗಳು)

*RNI No. KARBIL/2001/47147*

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

## ವಿಶೇಷ ರಾಜ್ಯ ಪತ್ರಿಕೆ

| ಭಾಗ– I | ಬೆಂಗಳೂರು, ಸೋಮವಾರ, ಅಕ್ಟೋಬರ್ ೧೯, ೨೦೧೫ (ಆಶ್ವಯುಜ ೨೭, ಶಕ ವರ್ಷ ೧೯೩೭) | ನಂ. ೧೧೨೬ |
|---|---|---|
| *Part–I* | *Bengaluru, Monday, October 19, 2015 (Aashwayuja 27, Shaka Varsha 1937)* | *No. 1126* |


**ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ನಿರ್ದೇಶನಾಲಯ**

**ಕರ್ನಾಟಕ ಸರ್ಕಾರದ ನಡವಳಿಗಳು**

**ವಿಷಯ:** ಸರ್ಕಾರದ ಪ್ರಮುಖ ಕಾರ್ಯಕ್ರಮಗಳ ಪ್ರಗತಿ ಪರಿಶೀಲನೆ ನಡೆಸುವ ಕುರಿತು.

**ಪ್ರಸ್ತಾವನೆ:**

ಸರ್ಕಾರದ ವಿವಿಧ ಇಲಾಖೆಗಳಲ್ಲಿ ನಡೆಯುತ್ತಿರುವ ಮಹತ್ವದ ಕಾರ್ಯಕ್ರಮಗಳನ್ನು ಪರಿಶೀಲಿಸಲು ಹಾಗೂ ಅವುಗಳ ಅನುಷ್ಠಾನಕ್ಕೆ ಉಂಟಾಗುತ್ತಿರುವ ತೊಂದರೆಗಳನ್ನು ಬಗೆಹರಿಸುವ ನಿಟ್ಟಿನಲ್ಲಿ ತುರ್ತು ಕ್ರಮ ಕೈಗೊಳ್ಳಲು ತಿಂಗಳಿಗೊಮ್ಮೆ ಮಾನ್ಯ ಮುಖ್ಯಮಂತ್ರಿಯವರ ನೇತೃತ್ವದಲ್ಲಿ ಪ್ರಗತಿ ಪರಿಶೀಲನೆ ನಡೆಸಲು ತೀರ್ಮಾನಿಸಲಾಗಿದೆ.

ವಿವಿಧ ಇಲಾಖೆಗಳ 15 ಪ್ರಮುಖವಾದ ವಲಯ / ಕಾರ್ಯಕ್ರಮಗಳನ್ನು ಮಾನ್ಯ ಮುಖ್ಯಮಂತ್ರಿಯವರು ಸ್ವತಃ ಪರಾಮರ್ಶೆ ಮಾಡಲಿದ್ದಾರೆ. ಅವುಗಳ ವಿವರವನ್ನು ಅನುಬಂಧ–1 ರಲ್ಲಿ ಇರಿಸಲಾಗಿದೆ.

ಮಾನ್ಯ ಮುಖ್ಯಮಂತ್ರಿಯವರ ಮಾಸಿಕ ಪ್ರಗತಿ ಪರಿಶೀಲನೆಗೆ ಪೂರಕವಾಗಿ ಹಾಗೂ ಹೆಚ್ಚುವರಿಯಾಗಿ ಸರ್ಕಾರದ ಬೇರೆ ಬೇರೆ ಇಲಾಖೆಗಳಲ್ಲಿ ನಡೆಯುತ್ತಿರುವ ಪ್ರಮುಖ ಕಾರ್ಯಕ್ರಮಗಳನ್ನು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಯವರು ಮತ್ತು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ & ಅಭಿವೃದ್ಧಿ ಆಯುಕ್ತರು ಮುಖ್ಯಮಂತ್ರಿಯವರ ಪರಿಶೀಲನೆಗೆ ಮುಂಚಿತವಾಗಿಯೇ ಪ್ರಥಮ ಹಂತದ ಸಭೆ ನಡೆಸಬೇಕಾಗಿರುತ್ತದೆ.

ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ–1 ರವರು ನಗರ ಪ್ರದೇಶ, ಮೂಲಭೂತ ಸೌಕರ್ಯ, ವಿದ್ಯುತ್, ವಾಣಿಜ್ಯ ಮತ್ತು ಕೈಗಾರಿಕೆ ಮತ್ತು ಐಟಿ & ಬಿಟಿ ಮುಂತಾದ ಇಲಾಖೆಗೆ ಸಂಬಂಧಪಟ್ಟ ಕಾರ್ಯಕ್ರಮಗಳು/ ಯೋಜನೆಗಳನ್ನು ಪರಾಮರ್ಶಿಸಲಿದ್ದಾರೆ. ಅದೇ ರೀತಿ ಅಭಿವೃದ್ಧಿ ಆಯುಕ್ತರು ಗ್ರಾಮೀಣ ಪ್ರದೇಶದ ಮತ್ತು ಸಾಮಾಜಿಕ ವಲಯಕ್ಕೆ ಸಂಬಂಧಿಸಿದ ಇಲಾಖೆಗಳ ಕಾರ್ಯಕ್ರಮಗಳನ್ನು ಪರಿಶೀಲನೆ ಮಾಡಲು ಉದ್ದೇಶಿಸಲಾಗಿದೆ.

ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ–1 ಮತ್ತು ಅಭಿವೃದ್ಧಿ ಆಯುಕ್ತರು ತಮಗೆ ವಹಿಸಿರುವ ಇಲಾಖಾ ಕಾರ್ಯಕ್ರಮಗಳನ್ನು ಪರಿಶೀಲನೆ ನಡೆಸುವಾಗ ಕಾರ್ಯಕ್ರಮಗಳ ಅನುಷ್ಠಾನದಲ್ಲಿ ಆಗಿರುವ ಪ್ರಗತಿ, ಎದುರಾಗಿರುವ ಸಮಸ್ಯೆಗಳು ಹಾಗೂ ಅವುಗಳ ನಿವಾರಣೆಗಾಗಿ ಕಂಡುಕೊಂಡಿರುವ ಪರಿಹಾರಾತ್ಮಕ ಸಲಹೆಗಳನ್ನು ಕ್ರೋಢೀಕರಿಸಿ ಅಂತಿಮಗೊಳಿಸುವುದು. ಈ ರೀತಿ ಅಂತಿಮಗೊಳಿಸಿದ ವಿವರಗಳನ್ನು ತಿಂಗಳಿಗೊಮ್ಮೆ ಮುಖ್ಯ ಕಾರ್ಯದರ್ಶಿಯವರ ನೇತೃತ್ವದಲ್ಲಿ ನಡೆಯುವ ಸಭೆಗೆ ಮಂಡಿಸುವುದು.

ಮುಖ್ಯ ಕಾರ್ಯದರ್ಶಿಯವರು ಅಪರ ಮುಖ್ಯಕಾರ್ಯದರ್ಶಿಗಳ ಹಂತದಲ್ಲಿ ನಡೆದ ಸಭೆಯ ವರದಿಯನ್ನು ಆಧರಿಸಿ ಪ್ರಗತಿ ಕುಂಠಿತಗೊಂಡಿರುವ ಇಲಾಖೆ/ಕಾರ್ಯಕ್ರಮಗಳನ್ನು ಪರಾಮರ್ಶಿಸಿ, ಸಂಬಂಧಪಟ್ಟ ಕಾರ್ಯಕ್ರಮ ಅನುಷ್ಠಾನದಲ್ಲಿ ಕಂಡುಬಂದಿರುವ ಸಮಸ್ಯೆಗಳು ಮತ್ತು ಅವುಗಳ ಪರಿಹಾರ ಕ್ರಮಗಳ ಕುರಿತು ಸಮಾಲೋಚಿಸಿ ಕಾರ್ಯಕ್ರಮಗಳನ್ನು ಯಶಸ್ವಿಯಾಗಿ ಹಾಗೂ ಸುಸೂತ್ರವಾಗಿ ಅನುಷ್ಠಾನಗೊಳಿಸಲು ತೆಗೆದುಕೊಳ್ಳಬೇಕಾದ ಎಲ್ಲಾ ಕ್ರಮಗಳನ್ನು ಕೈಗೊಂಡು ಅನುದಾನ ಬಿಡುಗಡೆಗೆ ಸಂಬಂಧಿಸಿದಂತೆ ಆರ್ಥಿಕ ಇಲಾಖೆಗೆ ಹಾಗೂ ಮಾರ್ಗಸೂಚಿ ಸೇರಿದಂತೆ ಇತರೆ ಆಡಳಿತಾತ್ಮಕ ವಿಚಾರಗಳಲ್ಲಿ ಯಾವುದಾದರೂ ಬದಲಾವಣೆಗಳು ಅವಶ್ಯವಿದ್ದಲ್ಲಿ ಸೂಕ್ತ ಕ್ರಮಕ್ಕಾಗಿ ಸಂಬಂಧಪಟ್ಟ ಇಲಾಖೆಗಳಿಗೆ ನಿರ್ದೇಶನ ನೀಡಬಹುದಾಗಿದೆ. ಮುಖ್ಯ ಕಾರ್ಯದರ್ಶಿಯವರ ಸಭೆಯಲ್ಲಿ ಆರ್ಥಿಕ ಇಲಾಖೆಯ ಪ್ರಧಾನ ಕಾರ್ಯದರ್ಶಿಯವರು ಉಪಸ್ಥಿತರಿದ್ದು, ಸಹಕರಿಸಲಿದ್ದಾರೆ.

ಮಾನ್ಯ ಮುಖ್ಯಮಂತ್ರಿಯವರ ನೇತೃತ್ವದಲ್ಲಿ ಪ್ರತಿ ತಿಂಗಳು ನಾಲ್ಕನೇ ವಾರದಲ್ಲಿ ಪ್ರಗತಿ ಪರಿಶೀಲನಾ ಸಭೆ ನಡೆಸಲು ತೀರ್ಮಾನಿಸಲಾಗಿರುತ್ತದೆ. ಆದ್ದರಿಂದ, ಅಪರ ಮುಖ್ಯ ಕಾರ್ಯದರ್ಶಿ–1 ಮತ್ತು ಅಭಿವೃದ್ಧಿ ಆಯುಕ್ತರು ಪ್ರತಿ ತಿಂಗಳು ಎರಡನೇ ವಾರದ ಗುರುವಾರ ಮತ್ತು ಶುಕ್ರವಾರದಂದು ಅನುಕ್ರಮವಾಗಿ ಪ್ರಥಮ ಹಂತದ ಪರಿಶೀಲನಾ ಸಭೆ ನಡೆಸುವುದು. ಅದೇ ರೀತಿ ಮುಖ್ಯ ಕಾರ್ಯದರ್ಶಿಯವರು ತಿಂಗಳಿನ ಮೂರನೇ ವಾರದ ಅಂತ್ಯದೊಳಗೆ ಸಭೆ ನಡೆಸಿ ಮುಖ್ಯಮಂತ್ರಿಗಳ ಸಭೆಗೆ ಅಗತ್ಯ ಅಂಕಿ–ಅಂಶ ಒದಗಿಸುತ್ತಾ ಇಲಾಖೆ/ ಕಾರ್ಯಕ್ರಮಗಳ ಪ್ರಗತಿ ತೃಪ್ತಿಕರವಾಗಿದೆಯೇ ಅಥವಾ ಇಲ್ಲವೇ ಮತ್ತು ಕಾರ್ಯಕ್ರಮ ಅನುಷ್ಠಾನದಲ್ಲಿ ಎದುರಿಸಿದ ಸಮಸ್ಯೆಗಳು ಹಾಗೂ ಅವುಗಳನ್ನು ಪರಿಹರಿಸಲು ತೆಗೆದುಕೊಂಡಿರುವ ಕ್ರಮಗಳು ಇತ್ಯಾದಿ ಬಗ್ಗೆ ಸಭೆಗೆ ಮಾಹಿತಿ

ಒದಗಿಸಬೇಕಾಗುತ್ತದೆ. ಈ ಎಲ್ಲಾ ಅಂಶಗಳನ್ನು ಪರಾಮರ್ಶಿಸುವ ಮಾನ್ಯ ಮುಖ್ಯಮಂತ್ರಿಯವರು ಯೋಜನೆಗಳ ಆರ್ಥಿಕ & ಬೌತಿಕ ಪ್ರಗತಿಯನ್ನು ಪರಿಶೀಲಿಸಿ ನೀತಿಯಲ್ಲಿ ಯಾವುದಾದರೂ ಬದಲಾವಣೆಗಳು ಅಗತ್ಯವಿರುವ ಮತ್ತು ಅನುದಾನ ಅವಶ್ಯವಿದ್ದಲ್ಲಿ ಆರ್ಥಿಕ ಇಲಾಖೆ ಸೇರಿದಂತೆ ಸಂಬಂಧಪಟ್ಟ ಇಲಾಖೆಗಳಿಗೆ ನಿರ್ದೇಶನ ನೀಡಲಿದ್ದಾರೆ.

ಅಭಿವೃದ್ಧಿ ಆಯುಕ್ತರು ನಡೆಸುವ ಸಭೆಗೆ ಜಿಲ್ಲಾ ಮಟ್ಟದ ಕಾರ್ಯಕ್ರಮಗಳ ಅನುಷ್ಠಾನದ ಮಾಹಿತಿ ಅಗತ್ಯ ಇರುವ ಹಿನ್ನೆಲೆಯಲ್ಲಿ ಜಿಲ್ಲಾ ಉಸ್ತುವಾರಿ ಕಾರ್ಯದರ್ಶಿಗಳು ಹಾಜರಿದ್ದು, ಜಿಲ್ಲೆಗಳ ಪ್ರಗತಿ, ಅನುಷ್ಠಾನ ಹಂತದಲ್ಲಿ ಎದುರಾಗಿರುವ ಸಮಸ್ಯೆ ಹಾಗೂ ಪರಿಹಾರ ಕ್ರಮಗಳ ಮಾಹಿತಿಯನ್ನು ಸಭೆಗೆ ಒದಗಿಸುವುದು.

ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ–1 ಹಾಗೂ ಅಭಿವೃದ್ಧಿ ಆಯುಕ್ತರು ನಡೆಸುವ ಸಭೆಗಳಿಗೆ ಯೋಜನಾ ಇಲಾಖೆಯ ಕಾರ್ಯದರ್ಶಿಗಳು ಹಾಗೂ ಆರ್ಥಿಕ ಇಲಾಖೆಯ ಕಾರ್ಯದರ್ಶಿ (ಆಯವ್ಯಯ & ಸಂಪನ್ಮೂಲ) ಮತ್ತು (ವೆಚ್ಚ) ಇವರುಗಳು ಸಹಕರಿಸಲಿದ್ದಾರೆ. ಉದ್ದೇಶಿತ ಯೋಜನೆಯ ಸಂಪೂರ್ಣ ಪ್ರಕ್ರಿಯೆಯನ್ನು ಗಣಕೀಕೃತಗೊಳಿಸಿ ಸೂಕ್ತ ಗಣಕೀಕೃತ ನಿರ್ವಹಣಾ ವ್ಯವಸ್ಥೆಯನ್ನು (ಎಂಐಎಸ್) ಯೋಜನಾ ಇಲಾಖೆಯು ಒದಗಿಸುವುದರೊಂದಿಗೆ ಪ್ರಗತಿ ಪರಿಶೀಲನಾ ಅಂಶಗಳು, ಮಾಹಿತಿಗಳು ಹಾಗೂ ದಾಖಲೆಗಳನ್ನು ನಿರ್ವಹಿಸಲಿದ್ದಾರೆ.

ಮೇಲೆ ವಿವರಿಸಿರುವ ಉದ್ದೇಶಗಳಿಗಾಗಿ ಈ ಕೆಳಕಂಡಂತೆ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಯೋಇ 182 ಎಸ್‌ಇಸಿವೈ 2015, ಬೆಂಗಳೂರು, ದಿನಾಂಕ: 14ನೇ ಅಕ್ಟೋಬರ್, 2015**

ಮೇಲೆ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಈ ಕೆಳಕಂಡಂತೆ ಆದೇಶಿಸಿದೆ.

1. ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ–1 ರವರ ನೇತೃತ್ವದಲ್ಲಿ ಅನುಬಂಧ–2 ರಲ್ಲಿ ನಮೂದಿಸಿರುವ ಇಲಾಖೆಗಳು ಹಾಗೂ ಸದರಿ ಇಲಾಖೆಗಳಲ್ಲಿನ ಪ್ರಮುಖ ಕಾರ್ಯಕ್ರಮಗಳ ಪರಿಶೀಲನೆಯನ್ನು ಪ್ರತಿ ತಿಂಗಳು ಎರಡನೇ ವಾರದ ಗುರುವಾರದಂದು ಸಂಬಂಧಪಟ್ಟ ಇಲಾಖಾ ಕಾರ್ಯದರ್ಶಿಗಳ ಉಪಸ್ಥಿತಿಯಲ್ಲಿ ನಡೆಸುವುದು. ಆರ್ಥಿಕ ಇಲಾಖೆಯ ಕಾರ್ಯದರ್ಶಿ (ಆಯವ್ಯಯ & ಸಂಪನ್ಮೂಲ) ಮತ್ತು ಯೋಜನಾ ಇಲಾಖೆಯ ಕಾರ್ಯದರ್ಶಿಯವರು ಉಪಸ್ಥಿತರಿದ್ದು, ಅಪರ ಮುಖ್ಯ ಕಾರ್ಯದರ್ಶಿಯವರಿಗೆ ಸಹಕರಿಸುವುದು.
2. ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ ಹಾಗೂ ಅಭಿವೃದ್ಧಿ ಆಯುಕ್ತರ ನೇತೃತ್ವದಲ್ಲಿ ಅನುಬಂಧ–3 ರಲ್ಲಿ ನಮೂದಿಸಿರುವ ಇಲಾಖೆಗಳು ಹಾಗೂ ಸದರಿ ಇಲಾಖೆಗಳಲ್ಲಿನ ಪ್ರಮುಖ ಕಾರ್ಯಕ್ರಮಗಳ ಪರಿಶೀಲನೆಯನ್ನು ಪ್ರತಿ ತಿಂಗಳು ಎರಡನೇ ವಾರದ ಶುಕ್ರವಾರದಂದು ಸಂಬಂಧಪಟ್ಟ ಇಲಾಖಾ ಕಾರ್ಯದರ್ಶಿಗಳ ಉಪಸ್ಥಿತಿಯಲ್ಲಿ ನಡೆಸುವುದು. ಆರ್ಥಿಕ ಇಲಾಖೆಯ ಕಾರ್ಯದರ್ಶಿ (ವೆಚ್ಚ) ಮತ್ತು ಯೋಜನಾ ಇಲಾಖೆಯ ಕಾರ್ಯದರ್ಶಿಯವರು ಉಪಸ್ಥಿತರಿದ್ದು, ಅಭಿವೃದ್ಧಿ ಆಯುಕ್ತರಿಗೆ ಸಹಕರಿಸುವುದು. ಅಭಿವೃದ್ಧಿ ಆಯುಕ್ತರು ನಡೆಸುವ ಸಭೆಗಳಿಗೆ ಕಡ್ಡಾಯವಾಗಿ ಎಲ್ಲಾ ಜಿಲ್ಲಾ ಉಸ್ತುವಾರಿ ಕಾರ್ಯದರ್ಶಿಯವರು ಹಾಜರಿರತಕ್ಕದ್ದು.
3. ಅಪರ ಮುಖ್ಯ ಕಾರ್ಯದರ್ಶಿ–1 ಮತ್ತು ಅಭಿವೃದ್ಧಿ ಆಯುಕ್ತರು ಸಭೆಗಳನ್ನು ನಡೆಸಿದ ನಂತರ ಸರ್ಕಾರದ ಮುಖ್ಯ ಕಾರ್ಯದರ್ಶಿಯವರಿಗೆ ಕಾರ್ಯಕ್ರಮದ ಅನುಷ್ಠಾನದಲ್ಲಿ ಉಂಟಾಗುತ್ತಿರುವ ಸಮಸ್ಯೆಗಳು ಹಾಗೂ ಪರಿಹಾರ ಕ್ರಮಗಳನ್ನು ಒಳಗೊಂಡ ವರದಿಯನ್ನು ಮುಖ್ಯ ಕಾರ್ಯದರ್ಶಿಯವರಿಗೆ ತ್ವರಿತವಾಗಿ ಸಲ್ಲಿಸತಕ್ಕದ್ದು.
4. ಸದರಿ ವರದಿಗಳು ಸಲ್ಲಿಕೆಯಾದ ನಂತರ ತಿಂಗಳ ಮೂರನೇ ಶನಿವಾರದಂದು ಮುಖ್ಯ ಕಾರ್ಯದರ್ಶಿಯವರ ನೇತೃತ್ವದಲ್ಲಿ ಸಭೆ ನಡೆಸಿ, ಯೋಜನೆಗಳ ಅನುಷ್ಠಾನದಲ್ಲಿ ಉಂಟಾಗುತ್ತಿರುವ ಸಮಸ್ಯೆಗಳನ್ನು ಪರಿಹರಿಸುವ ನಿಟ್ಟಿನಲ್ಲಿ ಅನುದಾನ ಬಿಡುಗಡೆ, ಮಾರ್ಗಸೂಚಿ / ಸುತ್ತೋಲೆ ಇತ್ಯಾದಿಗಳಲ್ಲಿ ಆಡಳಿತಾತ್ಮಕ ಬದಲಾವಣೆಗಳನ್ನು ಮಾಡಲು ಆರ್ಥಿಕ ಇಲಾಖೆ ಸೇರಿದಂತೆ ಎಲ್ಲಾ ಸಂಬಂಧಪಟ್ಟ ಇಲಾಖೆಗಳಿಗೆ ಸೂಕ್ತ ನಿರ್ದೇಶನಗಳನ್ನು ನೀಡುವುದು. ಈ ಸಭೆಗೆ ಸಂಬಂಧಪಟ್ಟ ಇಲಾಖಾ ಕಾರ್ಯದರ್ಶಿಗಳು, ಆರ್ಥಿಕ ಇಲಾಖೆಯ ಪ್ರಧಾನ ಕಾರ್ಯದರ್ಶಿಯವರು ಮತ್ತು ಜಿಲ್ಲಾ ಉಸ್ತುವಾರಿ ಕಾರ್ಯದರ್ಶಿಗಳು ಹಾಜರಿರತಕ್ಕದ್ದು.
5. ಮೇಲ್ಕಂಡ ಸಭೆಗಳನ್ನು ನಡೆಸುವ ದಿನದಂದು ಸಾರ್ವತ್ರಿಕ ರಜೆ ಇದ್ದಲ್ಲಿ ನಂತರದ ಕಛೇರಿ ಕಾರ್ಯ ನಿರ್ವಹಣಾ ದಿನದಂದು ನಡೆಸುವುದು ಹಾಗೂ ಮೇಲ್ಕಂಡ ಸಭೆಗಳಿಗೆ ಉಪಸ್ಥಿತರಿರಬೇಕಾದ ಕಾರ್ಯದರ್ಶಿಗಳು / ಅಧಿಕಾರಿಗಳು ಯಾವುದೇ ಸಂದರ್ಭದಲ್ಲಿ ಸಭೆಗಳಿಗೆ ಗೈರು ಹಾಜರಾಗತಕ್ಕದ್ದಲ್ಲ.
6. ಮಾನ್ಯ ಮುಖ್ಯಮಂತ್ರಿಯವರು ಪ್ರತಿ ತಿಂಗಳು ನಾಲ್ಕನೇ ವಾರದಲ್ಲಿ ಅನುಬಂಧ–1ರಲ್ಲಿ ನಮೂದಿಸಿರುವ 15 ಪ್ರಮುಖ ಕಾರ್ಯಕ್ರಮಗಳು / ವಲಯಗಳ ಪ್ರಗತಿ ಪರಿಶೀಲನೆ ನಡೆಸಲಿದ್ದಾರೆ. ಈ ಸಭೆಗೆ ಮುಖ್ಯ ಕಾರ್ಯದರ್ಶಿಯವರು ಇಲಾಖೆ/ ಕಾರ್ಯಕ್ರಮಗಳ ಪ್ರಗತಿ ತೃಪ್ತಿಕರವಾಗಿದೆಯೇ ಅಥವಾ ಇಲ್ಲವೇ ಮತ್ತು ಕಾರ್ಯಕ್ರಮ ಅನುಷ್ಠಾನದಲ್ಲಿ ಎದುರಿಸಿದ ಸಮಸ್ಯೆಗಳು ಹಾಗೂ ಅವುಗಳನ್ನು ಪರಿಹರಿಸಲು ತೆಗೆದುಕೊಂಡಿರುವ ಕ್ರಮಗಳು ಇತ್ಯಾದಿ ಬಗ್ಗೆ ಮಾಹಿತಿ ಕ್ರೋಢೀಕರಿಸಿ ಸಭೆಗೆ ಮಾಹಿತಿ ಒದಗಿಸಬೇಕಾಗುತ್ತದೆ. ಮಾನ್ಯ ಮುಖ್ಯಮಂತ್ರಿಯವರು ಪ್ರಗತಿ ಪರಿಶೀಲನೆ ನಡೆಸಿ ಸಂಬಂಧಪಟ್ಟ ಇಲಾಖೆಗೆ ಅನುದಾನ ಬಿಡುಗಡೆ ಸೇರಿದಂತೆ ಇತರೆ ಆಡಳಿತಾತ್ಮಕ ಕ್ರಮಗಳಿಗೆ ನಿರ್ದೇಶನ ನೀಡಲಿದ್ದಾರೆ. ಮಾನ್ಯ ಮುಖ್ಯಮಂತ್ರಿಯವರ ಸಭೆಗೆ ಯೋಜನಾ ಕಾರ್ಯದರ್ಶಿಯವರು ಎಲ್ಲಾ ಮಾಹಿತಿಗಳನ್ನು ಒದಗಿಸುವುದು.
7. ಮಾನ್ಯ ಮುಖ್ಯಮಂತ್ರಿಯವರ ಪ್ರಗತಿ ಪರಿಶೀಲನಾ ಸಭೆಗೆ ಅನುಬಂಧ–4 ರಲ್ಲಿರುವ ಮಾದರಿ ತಃಖ್ತೆಯನ್ನು ಅನುಸರಿಸುವುದು. ಜೊತೆಗೆ ಈ ತಃಖ್ತೆಯಲ್ಲಿನ ಪರಿಶೀಲನಾ ಅಂಶಗಳನ್ನು ಯೋಜನಾ ಇಲಾಖೆಯ ಕಾರ್ಯದರ್ಶಿಯವರು ಸಂಬಂಧಪಟ್ಟ ಇಲಾಖಾ ಕಾರ್ಯದರ್ಶಿಗಳೊಂದಿಗೆ ಸಮಾಲೋಚಿಸಿ ಅವಶ್ಯವಿದ್ದಲ್ಲಿ ಸೂಕ್ತ ಮಾರ್ಪಾಡುಗಳನ್ನು ಮಾಡಿ ಮುಖ್ಯ ಕಾರ್ಯದರ್ಶಿಯವರ ಅನುಮೋದನೆ ಪಡೆದು ಅಂತಿಮಗೊಳಿಸುವುದು.

8. ಮೇಲ್ಕಂಡ ಸಭೆಗಳಲ್ಲಿ ಮಾನ್ಯ ಮುಖ್ಯಮಂತ್ರಿಯವರ ಸಚಿವಾಲಯದ ಅಧಿಕಾರಿಗಳು ಪ್ರತಿನಿಧಿಸಿ, ಉಪಸ್ಥಿತರಾಗಿ ಅವರುಗಳಿಗೆ ಹಂಚಿಕೆ ಮಾಡಲಾಗಿರುವ ಜಿಲ್ಲೆಗಳಿಗೆ ಸಂಬಂಧಪಟ್ಟ ಅಂಶಗಳ ಟಿಪ್ಪಣಿ ಸಿದ್ದಪಡಿಸಿಕೊಂಡು ಸಚಿವಾಲಯದ ಹಂತದಲ್ಲಿ ಆಗಬೇಕಾದ ಕೆಲಸಗಳನ್ನು ತ್ವರಿತವಾಗಿ ಕೈಗೊಳ್ಳುವ ನಿಟ್ಟಿನಲ್ಲಿ ವೈಯಕ್ತಿಕ ಗಮನಹರಿಸುವುದು. ಪಟ್ಟಿಯನ್ನು ಅನುಬಂಧ–5ರಲ್ಲಿ ಇರಿಸಲಾಗಿದೆ

**9.** ಜಿಲ್ಲಾ ಉಸ್ತುವಾರಿ ಕಾರ್ಯದರ್ಶಿರವರ ವರದಿಯ ಮಾದರಿ ತಃಖ್ತೆಯನ್ನು ಯೋಜನಾ ಇಲಾಖೆಯ ಕಾರ್ಯದರ್ಶಿಯವರು ಸಂಬಂಧಪಟ್ಟ ಜಿಲ್ಲಾ ಉಸ್ತುವಾರಿ ಕಾರ್ಯದರ್ಶಿಗಳೊಂದಿಗೆ ಸಮಾಲೋಚಿಸಿ ಮುಖ್ಯ ಕಾರ್ಯದರ್ಶಿಯವರ ಅನುಮೋದನೆ ಪಡೆದು ಅಂತಿಮಗೊಳಿಸುವುದು.

**10.** ಎಲ್ಲಾ ಸಭೆಗಳಿಗೆ ಸಮನ್ವಯ ನಿರ್ವಹಣಾಧಿಕಾರಿಯಾಗಿ / ಸಂಚಾಲಕರಾಗಿ ಯೋಜನಾ ಇಲಾಖೆಯ ಕಾರ್ಯದರ್ಶಿಗಳು ಕಾರ್ಯನಿರ್ವಹಿಸುವುದು ಮತ್ತು ಎಲ್ಲಾ ಸಭೆಯ ಮಾಹಿತಿಗಳನ್ನು ನಿರ್ವಹಿಸುವುದರೊಂದಿಗೆ ಯೋಜನೆಯ ಸಂಪೂರ್ಣ ಪ್ರಕ್ರಿಯೆಯನ್ನು ಗಣಕೀಕೃತಗೊಳಿಸುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೌಶಿಕ್ ಮುಖರ್ಜಿ**
ಸರ್ಕಾರದ ಮುಖ್ಯ ಕಾರ್ಯದರ್ಶಿ

**ಅನುಬಂಧ–1**

**ಮಾನ್ಯ ಮುಖ್ಯಮಂತ್ರಿಯವರ ನೇತೃತ್ವದಲ್ಲಿ ನಡೆಯುವ ಸಭೆಯಲ್ಲಿ ಪರಾಮರ್ಶೆಗೊಳಪಡುವ ಇಲಾಖೆಗಳು ಮತ್ತು ಪ್ರಮುಖ 15 ಯೋಜನೆಗಳು / ಕಾರ್ಯಕ್ರಮಗಳ ವಿವರ;**

1. ನೀರಾವರಿ ಯೋಜನೆಗಳು– ಕೃಷ್ಣ ಭಾಗ್ಯ ಜಲ ನಿಗಮ ಕಾಮಗಾರಿಗಳು
2. ರಸ್ತೆ ಮತ್ತು ಸೇತುವೆಗಳು– ಲೋಕೋಪಯೋಗಿ ಇಲಾಖೆ (ರಾಷ್ಟ್ರೀಯ ಹೆದ್ದಾರಿ, ರಾಜ್ಯ ಹೆದ್ದಾರಿ ಕಾಮಗಾರಿಗಳು, ಇತ್ಯಾದಿ)
3. ನಗರ ನೀರು ಸರಬರಾಜು ಮತ್ತು ಒಳಚರಂಡಿ ವ್ಯವಸ್ಥೆ– ಕೆ.ಯು.ಡಬ್ಲ್ಯೂ.ಎಸ್.ಡಿ.ಬಿ
4. ನಗರ ಮೂಲಭೂತ ಸೌಕರ್ಯ ಯೋಜನೆಗಳು– ಮುಖ್ಯಮಂತ್ರಿಗಳ ನಗರೋಥ್ಥಾನ ಯೋಜನೆ
5. ಎಸ್.ಹೆಚ್.ಎಲ್.ಸಿ.ಸಿ ಹಾಗೂ ಎಸ್.ಎಲ್.ಎಸ್.ಡಬ್ಲ್ಯೂ.ಸಿ ವತಿಯಿಂದ ಅನುಮೋದನೆ ಪಡೆದುಕೊಂಡ ಕೈಗಾರಿಕೆ ಹಾಗೂ ಐ.ಟಿ & ಬಿ.ಟಿ ಕ್ಷೇತ್ರಕ್ಕೆ ಸಂಬಂಧಿಸಿದ ಯೋಜನೆಗಳ ಪರಿಶೀಲನೆ. (ಇಲಾಖೆಗಳು– ವಾಣಿಜ್ಯ & ಕೈಗಾರಿಕೆ, ಐ.ಟಿ & ಬಿ.ಟಿ ಇಲಾಖೆಗಳು, ಕರ್ನಾಟಕ ಕೈಗಾರಿಕೆ ಪ್ರದೇಶಾಭಿವೃದ್ಧಿ ಮಂಡಳಿ ಹಾಗೂ ಕೆ.ಎಸ್.ಎಸ್.ಐ.ಡಿ.ಸಿ)
6. ಗ್ರಾಮೀಣ ಕುಡಿಯುವ ನೀರು ಸರಬರಾಜು ಮತ್ತು ಉದ್ಯೋಗಾವಕಾಶ – ರಾಷ್ಟ್ರೀಯ ಗ್ರಾಮೀಣ ಕುಡಿಯುವ ನೀರಿನ ಯೋಜನೆ ಮತ್ತು ಗ್ರಾಮೀಣ ಉದ್ಯೋಗ ಖಾತ್ರಿ ಯೋಜನೆ
7. ಗ್ರಾಮೀಣ ರಸ್ತೆ ಯೋಜನೆಗಳು– ಪಿ.ಎಂ.ಜಿ.ಎಸ್.ವೈ, ಸಿ.ಎಂ.ಜಿ.ಆರ್.ವೈ ; ಗ್ರಾಮೀಣಾಭಿವೃದ್ಧಿ ಇಲಾಖೆ, ಲೋಕೋಪಯೋಗಿ ಇಲಾಖೆ
8. ರಾಜ್ಯದಲ್ಲಿನ ವಿದ್ಯುತ್ ಪರಿಸ್ಥಿತಿಯ ಪ್ರಗತಿ ಪರಿಶೀಲನೆ (ವಿದ್ಯುತ್ ಉತ್ಪಾದನೆ, ಖರೀದಿ ಮತ್ತು ಸರಬರಾಜು)
9. ಕಂದಾಯ– 11ಇ ನಕ್ಷೆ ಬಾಕಿ ಪ್ರಕರಣಗಳು ಮತ್ತು ತತ್ಕಾಲ್ ಪೋಡಿ ಬಾಕಿ ಪ್ರಕರಣಗಳು
10. ಆರೋಗ್ಯ – ರಾಷ್ಟ್ರೀಯ ಆರೋಗ್ಯ ಮಿಷನ್
11. ಆಹಾರ ಭದ್ರತೆ–ಅನ್ನ ಭಾಗ್ಯ ಯೋಜನೆ
12. ಶಿಕ್ಷಣ–ಶಿಕ್ಷಣ ಹಕ್ಕು ಕಾಯ್ದೆಯ ಅನುಷ್ಠಾನ ಮತ್ತು ಐ.ಸಿ.ಟಿ–3ನೇ ಹಂತದ ಅನುಷ್ಟಾನ
13. ಕೃಷಿ–ಕೃಷಿ ಭಾಗ್ಯ, ಭೂ ಸಮೃದ್ಧಿ, ರಾಗಿ ಮತ್ತು ಜೋಳ ವಿಶೇಷ ಯೋಜನೆ
14. ತೋಟಗಾರಿಕೆ– ರಾಷ್ಟ್ರೀಯ ತೋಟಗಾರಿಕೆ ಮಿಷನ್, ಆರ್.ಕೆ.ವಿ.ವೈ
15. ಹೈದರಾಬಾದ್ ಕರ್ನಾಟಕ ಪ್ರದೇಶಾಭಿವೃದ್ಧಿ ಹಾಗೂ ಡಾ॥ ನಂಜುಂಡಪ್ಪ ವರದಿಯಂತೆ 39 ಹಿಂದುಳಿದ ತಾಲ್ಲೂಕುಗಳ ಅಭಿವೃದ್ಧಿ ಕಾರ್ಯಕ್ರಮಗಳ ಪರಿಶೀಲನೆ.

**ಅನುಬಂಧ–2**

**ಸರ್ಕಾರದ ಅಪರ ಮುಖ್ಯಕಾರ್ಯದರ್ಶಿ–1 ರವರ ನೇತೃತ್ವದಲ್ಲಿ ಪರಾಮರ್ಶೆಗೊಳಪಡುವ ನಗರ ಪ್ರದೇಶ ಹಾಗೂ ಪ್ರಮುಖ ಮೂಲಸೌಲಭ್ಯ ಮತ್ತು ಆರ್ಥಿಕ ವಲಯಕ್ಕೆ ಸಂಬಂಧಿಸಿ ಇಲಾಖೆಗಳು ಮತ್ತು ಕಾರ್ಯಕ್ರಮಗಳು/ ಯೋಜನೆಗಳ ಪಟ್ಟಿ ;**

| ಕ್ರಸಂ | ವಲಯ (ಥೀಮ್) | ಕಾರ್ಯಕ್ರಮಗಳು | ಒಳಪಡುವ ಇಲಾಖೆಗಳು |
|---|---|---|---|
| 1. | ನೀರು ಮತ್ತು ನೈರ್ಮಲ್ಯ | **1. ನೀರು ಸರಬರಾಜು ಮತ್ತು ಒಳಚರಂಡಿ ವ್ಯವಸ್ಥೆ, ಕೆ.ಯು.ಡಬ್ಲ್ಯೂ.ಎಸ್.ಡಿ.ಬಿ ಇವರಿಂದ**<br>**2. ಎನ್‌ಕೆಯುಡಬ್ಲ್ಯೂಎಸ್‌ಬಿ ಇವರ ನೀರು ಸರಬರಾಜು ಯೋಜನೆಗಳು**<br>**3. ಮುಖ್ಯಮಂತ್ರಿಯವರ ನಗರೋತ್ಥಾನ ಯೋಜನೆ**<br>**4. ಸ್ವಚ್ಛ ಭಾರತ– ನಗರ**<br>5. ಘನ ತ್ಯಾಜ್ಯ ನಿರ್ವಹಣೆ | 1. ಕೆಯುಡಬ್ಲ್ಯೂಎಸ್‌ಡಿಬಿ<br>2. ಕೆ.ಯು.ಐ.ಡಿ.ಎಫ್.ಸಿ<br>1. ನಗರಾಭಿವೃದ್ಧಿ |

| ಕ್ರಸಂ | ವಲಯ (ಥೀಮ್) | ಕಾರ್ಯಕ್ರಮಗಳು | ಒಳಪಡುವ ಇಲಾಖೆಗಳು |
|---|---|---|---|
| 2. | ನಗರ ಮೂಲಭೌತ ಸೌಕರ್ಯ– ರಸ್ತೆಗಳು | **1. ರಾಷ್ಟ್ರೀಯ ಹೆದ್ದಾರಿ ಅಭಿವೃದ್ಧಿ ಕಾಮಗಾರಿಗಳು**<br>**2. ಕೆ–ಶಿಪ್, ಕೆಆರ್‌ಡಿಸಿಎಲ್ ವತಿಯಿಂದ ಕೈಗೊಳ್ಳುತ್ತಿರುವ ರಾಜ್ಯ ಹೆದ್ದಾರಿ ಅಭಿವೃದ್ಧಿ ಕಾಮಗಾರಿಗಳು** | 1. ಲೋಕೋಪಯೋಗಿ ಇಲಾಖೆ<br>2. ಕೆ–ಶಿಪ್<br>3. ಕೆಆರ್‌ಡಿಸಿಎಲ್<br>4. ಎನ್.ಹೆಚ್.ಎ.ಐ |
| 3. | ನಗರ ಮೂಲಭೌತ ಸೌಕರ್ಯ– ಸಾರಿಗೆ | 1. ಜೆಎನ್‌ಎನ್‌ಯುಆರ್‌ಎಂ<br>2. ಮೆಟ್ರೋ | 1. ನಗರಾಭಿವೃದ್ಧಿ ಇಲಾಖೆ<br>2. ಬಿಎಂಆರ್‌ಸಿಎಲ್ |
| 4. | ವಸತಿ | 1. ಸ್ಮಾರ್ಟ್ ಸಿಟಿ ಯೋಜನೆಗಳು<br>2. ಅಮೃತ್<br>3. ವಾಜಪೇಯಿ ನಗರ ವಸತಿ ಯೋಜನೆ<br>4. ಏಕೀಕೃತ ವಸತಿ & ಕೊಳಚೆ ಪ್ರದೇಶ ಅಭಿವೃದ್ಧಿ ಕಾರ್ಯಕ್ರಮಗಳು | 1. ನಗರಾಭಿವೃದ್ಧಿ ಇಲಾಖೆ<br>2. ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮ<br>3. ವಸತಿ ಇಲಾಖೆ |
| 5. | ಕೌಶಲ್ಯ ಅಭಿವೃದ್ಧಿ ಮತ್ತು ಉದ್ಯೋಗ ಸೃಷ್ಟಿ | 1. ರಾಷ್ಟ್ರೀಯ ನಗರ ಜೀವನಾಧಾರ ಮಿಷನ್ (ಎನ್‌ಯುಎಲ್‌ಎಂ)<br>2. ಉದ್ಯೋಗ ಮತ್ತು ತರಭೇತಿ ಕಾರ್ಯಕ್ರಮಗಳು<br>3. ಕೌಶಲ್ಯಾಭಿವೃದ್ಧಿ ನಿಗಮದ ಕಾರ್ಯಕ್ರಮಗಳು<br>4. ವಾಣಿಜ್ಯ ಮತ್ತು ಕೈಗಾರಿಕೆ, ಜವಳಿ ಇಲಾಖೆಗಳ ತರಭೇತಿ ಕಾರ್ಯಕ್ರಮಗಳು– ಕೌಶಲ್ಯ ಅಭಿವೃದ್ಧಿ ಯೋಜನೆ, ಕೈಗಾರಿಕೆ ವಿಕಾಸ ಯೋಜನೆ<br>5. ಕಾರ್ಮಿಕ ಇಲಾಖೆಯ ಕಾರ್ಯಕ್ರಮಗಳು | 1. ನಗರಾಭಿವೃದ್ಧಿ ಇಲಾಖೆ<br>2. ಕಾರ್ಮಿಕ ಇಲಾಖೆ<br>3. ಕೌಶಲ್ಯಾಭಿವೃದ್ಧಿ ನಿಗಮ<br>4. ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ |
| 6. | ಕೈಗಾರೀಕರಣ | 1. ಎಸ್‌ಹೆಚ್‌ಎಲ್‌ಸಿಸಿ/ ಎಸ್‌ಎಲ್‌ಎಸ್‌ಡಬ್ಲ್ಯೂಸಿ ವತಿಯಿಂದ ಕೈಗಾರಿಕೆಗೆ ಸಂಬಂಧಿಸಿದಂತೆ ಅನುಮೋದನೆಗೊಂಡಿರುವ ಹೂಡಿಕೆ ಪ್ರಸ್ತಾವನೆಗಳ ವಿಮರ್ಶೆ<br>2. ಕೆ.ಐ.ಎ.ಡಿ.ಬಿ ರವರಿಂದ ಆಗುವ ಕೈಗಾರಿಕೆ ಪ್ರದೇಶಾಭಿವೃದ್ಧಿ<br>3. ಕೆಎಸ್‌ಎಸ್‌ಐಡಿಸಿ ವತಿಯಿಂದ ಆಗುತ್ತಿರುವ ಕೈಗಾರಿಕೆ ಎಸ್ಟೇಟ್‌ಗಳ ಅಭಿವೃದ್ಧಿ | 1. ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ<br>2. ಕೆಐಎಡಿಬಿ<br>3. ಕೆಎಸ್‌ಎಸ್‌ಐಡಿಸಿ |
| 7 | ಮಾಹಿತಿ ತಂತ್ರಜ್ಞಾನ & ಜೈವಿಕ ತಂತ್ರಜ್ಞಾನ | 1. ಎಸ್‌ಹೆಚ್‌ಎಲ್‌ಸಿಸಿ/ ಎಸ್‌ಎಲ್‌ಎಸ್‌ಡಬ್ಲ್ಯೂಸಿ ವತಿಯಿಂದ ಮಾಹಿತಿ ತಂತ್ರಜ್ಞಾನ & ಜೈವಿಕ ತಂತ್ರಜ್ಞಾನ ಇಲಾಖೆಗೆ ಸಂಬಂಧಿಸಿದಂತೆ ಅನುಮೋದನೆಗೊಂಡಿರುವ ಹೂಡಿಕೆ ಪ್ರಸ್ತಾವನೆಗಳ ವಿಮರ್ಶೆ<br>2. ಗ್ರಾಮೀಣ ಬಿ.ಪಿ.ಓಗಳು | 1. ಮಾಹಿತಿ ತಂತ್ರಜ್ಞಾನ & ಜೈವಿಕ ತಂತ್ರಜ್ಞಾನ ಇಲಾಖೆ |
| 8. | ಉನ್ನತ ಶಿಕ್ಷಣ | 1. ರಾಷ್ಟ್ರೀಯ ಉನ್ನತ ಶಿಕ್ಷಣ ಅಭಿಯಾನ<br>2. ಹೊಸ ಸರ್ಕಾರಿ ವೈದ್ಯಕೀಯ & ಇಂಜಿನಿಯರಿಂಗ್ ಕಾಲೇಜುಗಳ ಸ್ಥಾಪನೆ | 1. ಉನ್ನತ ಶಿಕ್ಷಣ ಇಲಾಖೆ<br>2. ತಾಂತ್ರಿಕ ಶಿಕ್ಷಣ |
| 9. | ಪ್ರವಾಸೋದ್ಯಮ | 1. ಪ್ರವಾಸೋದ್ಯಮ ಮೂಲಭೂತ ಸೌಕರ್ಯಗಳು<br>2. ಕರ್ನಾಟಕ ಪ್ರವಾಸೋದ್ಯಮ ದೃಷ್ಟಿಕೋನ ಸಮಿತಿಯ ಶಿಫಾರಸ್ಸು ಅನುಷ್ಠಾನದ ಬಗ್ಗೆ | ಪ್ರವಾಸೋದ್ಯಮ |
| 10 | ಇಂಧನ | 1. ಕೆ.ಪಿ.ಸಿ ವತಿಯಿಂದ ವಿದ್ಯುತ್ ಉತ್ಪಾದನೆ<br>2. ಪಿಸಿಕೆಎಲ್ ವತಿಯಿಂದ ವಿದ್ಯುತ್ ಖರೀದಿ<br>3. ಎಲ್ಲಾ ವಿದ್ಯುತ್ ಪ್ರಸರಣ ಕಂಪನಿಗಳಿಂದ ಆಗುವ ಸರಬರಾಜು ವಿಶೇಷವಾಗಿ ಗ್ರಾಮೀಣ ವಿದ್ಯುತ್ ಯೋಜನೆಗಳು | ಇಂಧನ ಇಲಾಖೆ |

**ಅನುಬಂಧ–3**

**ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ ಮತ್ತು ಅಭಿವೃದ್ಧಿ ಆಯುಕ್ತರ ನೇತೃತ್ವದಲ್ಲಿ ಪರಾಮರ್ಶೆಗೊಳಪಡುವ ಗ್ರಾಮೀಣ ಮತ್ತು ಸಾಮಾಜಿಕ ಅಭಿವೃದ್ಧಿ ವಲಯಕ್ಕೆ ಸಂಬಂಧಿಸಿ ಇಲಾಖೆಗಳು ಮತ್ತು ಕಾರ್ಯಕ್ರಮಗಳು / ಯೋಜನೆಗಳ ಪಟ್ಟಿ ;**

| ಕ್ರ.ಸಂ | ವಲಯ (ಥೀಮ್) | ಕಾರ್ಯಕ್ರಮಗಳು | ಒಳಪಡುವ ಇಲಾಖೆಗಳು |
|---|---|---|---|
| 1. | ಗ್ರಾಮೀಣಾಭಿವೃದ್ಧಿ | **1. ರಾಷ್ಟ್ರೀಯ ಗ್ರಾಮೀಣ ಕುಡಿಯುವ ನೀರಿನ ಯೋಜನೆ.**<br>**2. ಸ್ವಚ್ಛ ಭಾರತ– ಗ್ರಾಮೀಣ**<br>3. ಗ್ರಾಮೀಣ ಉದ್ಯೋಗ ಖಾತ್ರಿ ಯೋಜನೆ<br>4. ಪ್ರಧಾನಮಂತ್ರಿ ಗ್ರಾಮೀಣ ಸಡಕ್ ಯೋಜನೆ<br>5. ಮುಖ್ಯಮಂತ್ರಿಗಳ ಗ್ರಾಮೀಣ ರಸ್ತೆ ನಿಧಿ ಯೋಜನೆ<br>6. ರಾಷ್ಟ್ರೀಯ ಗ್ರಾಮೀಣ ಮೂಲಸೌಲಭ್ಯ ಮಿಷನ್ | 2. ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ<br>3. ಲೋಕೋಪಯೋಗಿ ಇಲಾಖೆ |
| 2. | ನೀರಾವರಿ ಯೋಜನೆಗಳು | **1. ಕೆ.ಬಿ.ಜೆ.ಎನ್.ಎಲ್**<br>**2. ಕೆ.ಎನ್.ಎನ್.ಎಲ್**<br>**3. ಸಿ.ಎನ್.ಎನ್.ಎಲ್** | ಜಲ ಸಂಪನ್ಮೂಲ ಇಲಾಖೆ (ಭಾರಿ ನೀರಾವರಿ) |
| 3. | ವಸತಿ | ಇಂದಿರಾ ಆವಾಸ್ ಯೋಜನೆ, ಬಸವ ವಸತಿ ಯೋಜನೆ ಸೇರಿದಂತೆ ಎಲ್ಲಾ ಗ್ರಾಮೀಣ ವಸತಿ ಯೋಜನೆಗಳು. | 1. ರಾಜೀವ್‌ಗಾಂಧಿ ಗ್ರಾಮೀಣ ವಸತಿ ನಿಗಮ<br>2. ವಸತಿ ಇಲಾಖೆ |
| 4. | ಶಿಕ್ಷಣ | ಶಿಕ್ಷಣ ಹಕ್ಕು ಕಾಯ್ದೆಯ ಅನುಷ್ಠಾನ;<br>1. ಸರ್ವ ಶಿಕ್ಷಣ ಅಭಿಯಾನ<br>2. ರಾಷ್ಟ್ರೀಯ ಮಧ್ಯಮ ಶಿಕ್ಷಣ ಅಭಿಯಾನ | ಶಿಕ್ಷಣ ಇಲಾಖೆ (ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ) |
| 5. | ಉತ್ಪಾದಕತೆ ಮತ್ತು ನೀರಿನ ನಿರ್ವಹಣೆ | **1. ಕೃಷಿ ಭಾಗ್ಯ**<br>2. **ರಾಷ್ಟ್ರೀಯ ತೋಟಗಾರಿಕಾ ಮಿಷನ್**<br>3. ಭೂ ಚೇತನ<br>4. ಭೂ ಸಂವೃದ್ಧಿ<br>5. ಎನ್.ಎಂ.ಎಸ್.ಎ<br>6. ರಾಷ್ಟ್ರೀಯ ಕೃಷಿ ವಿಕಾಸ ಯೋಜನೆ<br>7. ಬೆಳೆ ಸಾಲದ ಬಡ್ಡಿ ರಿಯಾಯಿತಿ<br>8. ಸುಜಲಾ ಅಥವಾ ಯೋಜನಾ ಇಲಾಖೆ ಅಂತಿಮಗೊಳಿಸುವ ಯಾವುದಾದರೊಂದು ಯೋಜನೆ.<br>9. ಕೆರೆ ಅಭಿವೃದ್ಧಿ | 1. ಕೃಷಿ ಇಲಾಖೆ<br>2. ತೋಟಗಾರಿಕೆ ಇಲಾಖೆ<br>3. ರೇಷ್ಮೆ ಇಲಾಖೆ<br>4. ಸಣ್ಣ ನೀರಾವರಿ ಇಲಾಖೆ |
| 6. | ಆಹಾರ, ಆರೋಗ್ಯ & ಪೌಷ್ಟಿಕತೆ | **1. ಆಹಾರ ಭದ್ರತೆ (ಅನ್ನ ಭಾಗ್ಯ)**<br>**2. ರಾಷ್ಟ್ರೀಯ ಆರೋಗ್ಯ ಮಿಷನ್ (ಗ್ರಾಮೀಣ & ನಗರ)**<br>**3.** ಜಿಲ್ಲಾಸ್ಪತ್ರೆ ಸೇರಿದಂತೆ ಎಲ್ಲಾ ಹಂತದ ಆಸ್ಪತ್ರೆಗಳಲ್ಲಿ ಔಷಧಿಗಳ ಲಭ್ಯತೆ.<br>**4.** ಆರೋಗ್ಯ ವಿಮೆಗಳು ; ಅ) ಯಶಸ್ವಿನಿ (ಸಹಕಾರ), ಆ) ರಾಷ್ಟ್ರೀಯ ಸ್ವಾಸ್ಥ್ಯ ಬಿಮಾ ಯೋಜನೆ (ಕಾರ್ಮಿಕ), ಇ) ಆರೋಗ್ಯಶ್ರೀ (ಆರೋಗ್ಯ)<br>**5.** ಐ.ಸಿ.ಡಿ.ಎಸ್ (ಬಾಲ್ಯ ಪೂರ್ವ ಶಿಕ್ಷಣ ಒಳಗೊಂಡಂತೆ) | 1. ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ<br>2. ಆರೋಗ್ಯ & ಕುಟುಂಬ ಕಲ್ಯಾಣ ಇಲಾಖೆ<br>3. ಸಹಕಾರ ಇಲಾಖೆ<br>4. ಕಾರ್ಮಿಕ ಇಲಾಖೆ<br>5. ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆ |

| ಕ್ರ.ಸಂ | ವಲಯ (ಥೀಮ್) | ಕಾರ್ಯಕ್ರಮಗಳು | ಒಳಪಡುವ ಇಲಾಖೆಗಳು |
|---|---|---|---|
| 7. | ಸಾಮಾಜಿಕ ಭದ್ರತೆ ಯೋಜನೆಗಳು | 1. ವೃದ್ಧಾಪ್ಯ ಯೋಜನೆ (ಓಎಪಿ)<br>2. ವಿಧವಾ ವೇತನ (ಡಿ.ಡಬ್ಲ್ಯೂಪಿ)<br>3. ಅಂಗವಿಕಲ ಪಿಂಚಣಿ (ಪಿಹೆಚ್‌ಪಿ)<br>4. ಸಂಧ್ಯಾ ಸುರಕ್ಷಾ ಯೋಜನೆ<br>೫. ಭಾಗ್ಯಲಕ್ಷ್ಮಿ ಯೋಜನೆ | 1. ಕಂದಾಯ<br>2. ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆ |
| 8 | ಸಾಮಾಜಿಕ ನ್ಯಾಯ | 1. ಎಸ್‌ಸಿಪಿ/ಟಿಎಸ್‌ಪಿ<br>2. ವಿದ್ಯಾಸಿರಿ<br>**3. ವಿದ್ಯಾರ್ಥಿ ವೇತನಗಳು– ಪ್ರೀ ಮೆಟ್ರಿಕ್, ಪೋಸ್ಟ್ ಮೆಟ್ರಿಕ್, ಶುಲ್ಕ ವಿನಾಯ್ತಿ ಇತ್ಯಾದಿ**<br>4. ಗಂಗಾ ಕಲ್ಯಾಣ | 1. ಸಮಾಜ ಕಲ್ಯಾಣ ಇಲಾಖೆ<br>2. ಹಿಂದುಳಿದ ವರ್ಗಗಳ ಇಲಾಖೆ<br>3. ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ<br>4. ಶಿಕ್ಷಣ ಇಲಾಖೆ |
| 9 | ಪ್ರಾದೇಶಿಕ ಅಭಿವೃದ್ಧಿ | 1. ಹೈದರಾಬಾದ್ ಕರ್ನಾಟಕ ಅಭಿವೃದ್ಧಿ<br>2. ಡಾ॥ನಂಜುಂಡಪ್ಪ ವರದಿಯ ಹಿಂದುಳಿದ ತಾಲ್ಲೂಕುಗಳ ಅಭಿವೃದ್ಧಿ<br>3. ಎಸ್.ಡಿ.ಪಿ<br>4. ಶಾಸಕರ ಸ್ಥಳೀಯ ಪ್ರದೇಶಾಭಿವೃದ್ಧಿ ಯೋಜನೆಗಳು (ಕೆ.ಎಲ್.ಎಲ್.ಎ.ಡಿ.ಎಸ್) | 1. ಯೋಜನೆ ಇಲಾಖೆ<br>2. ಕಂದಾಯ ಇಲಾಖೆ<br>3. ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ |
| 10 | ಕಂದಾಯ | **1. 11ಇ ನಕ್ಷೆ ಬಾಕಿ**<br>**2. ತತ್ಕಾಲ್ ಪೋಡಿ ಬಾಕಿ**<br>3. ಪರಿವರ್ತನೆ ಪೂರ್ವ ನಕ್ಷೆ<br>4. ಕಲಂ 128 & 129ರ ಪ್ರಕರಣಗಳು (ತಹಸೀಲ್ದಾರ್)<br>5. ಕಲಂ 136(2)ರ ಪ್ರಕರಣಗಳು (ಉಪ ವಿಭಾಗಾಧಿಕಾರಿಗಳು)<br>೬. ಕಲಂ 136 (3)ರ ಪ್ರಕರಣಗಳು (ಜಿಲ್ಲಾಧಿಕಾರಿಗಳು) | 1. ಕಂದಾಯ ಇಲಾಖೆ<br>2. ಮೋಜಣಿ ಮತ್ತು ಭೂದಾಖಲೆಗಳ ಇಲಾಖೆ |
| 11 | ಇಂಧನ | 1. ಗ್ರಾಮೀಣ ವಿದ್ಯುತ್ತೀಕರಣ/ ಟ್ರಾನ್ಸ್‌ಫಾರ್ಮರ್‌ಗಳ ಸರಬರಾಜು<br>2. ನಿರಂತರ ಜ್ಯೋತಿ<br>3. ಸರ್ಕಾರಿ ಕಟ್ಟಡಗಳ ಛಾವಣಿ ಮೇಲೆ ಸೌರ ವಿದ್ಯುತ್<br>4. ಗ್ರಾಮೀಣ ಪ್ರದೇಶದಲ್ಲಿನ ವಿದ್ಯುತ್ ಸರಬರಾಜು ಅವಧಿ | ಇಂಧನ ಇಲಾಖೆ |

**Annexure-4**
**Proforma for Progress Review of Major programmes by Hon'ble Chief Minister**

**Name of the District: …………………………..**

| Sl. No. | Department | Scheme | Annual Outlay | OB | Total | Financial Progress | | | | | | Physical Progress | | | |
|---|---|---|---|---|---|---|---|---|---|---|---|---|---|---|---|
| | | | | | | Expenditure Upto End of Prev Month | | Expenditure during the Month | | Cumulative Expenditure upto End of the Month | | | | | |
| | | | | | | Release | Exp | Release | Exp | Release | Exp | Items | Unit | Target | Achievement |
| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 | 14 | 15 | 16 |
| 1 | Major Irrigation | KBJNL | | | | | | | | | | Construction of Canal | Kms | | |
| | | | | | | | | | | | | Construction of distributories | Kms | | |
| 2 | PWD | Roads & Bridges (National Highway, State Highway etc) | | | | | | | | | | KSHIP roads | Kms | | |
| | | | | | | | | | | | | State Highway Roads | Kms | | |
| | | | | | | | | | | | | KRDCL Roads | Kms | | |
| 3 | UDD | Urban Water Supply and Drainage (KUWSDB) | | | | | | | | | | 24 X 7 water supply | Hours | | |
| | | | | | | | | | | | | Length of drainage | Kms | | |
| | | Sanitation | | | | | | | | | | Solid Waste Management units | Nos | | |
| 4 | UDD | Urban Infrastructure (Nagarotthana) | | | | | | | | | | Phase - I | | | |
| | | | | | | | | | | | | Phase - II | | | |
| 5 | C & I and IT &BT | Projects cleared by SHLCC, SLSWC | | | | | | | | | | Industrial Projects | Nos | | |
| | | | | | | | | | | | | IT & BT Projects | Nos | | |
| 6 | KIADB | Land Acquisition for Industrial Projects | | | | | | | | | | Extent of area | Ha | | |
| 7 | RDPR | Rural Drinking Water Supply - NRDWP | | | | | | | | | | Multi village scheme | Nos | | |
| | | | | | | | | | | | | Installation of RO plants | Nos | | |

| Sl. No. | Department | Scheme | Annual Outlay | OB | Total | Financial Progress | | | | | | Physical Progress | | | |
|---|---|---|---|---|---|---|---|---|---|---|---|---|---|---|---|
| | | | | | | Expenditure Upto End of Prev Month | | Expenditure during the Month | | Cumulative Expenditure upto End of the Month | | | | | |
| | | | | | | Release | Exp | Release | Exp | Release | Exp | Items | Unit | Target | Achievement |
| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 | 14 | 15 | 16 |
| 8 | RDPR | MGNREGA | | | | | | | | | | No. of Man days | Nos | | |
| 9 | RDPR | Rural Roads (PMGSY & CMGSY: RDPR & PWD) | | | | | | | | | | PMGSY Roads | Kms | | |
| | | | | | | | | | | | | CMGSY Roads | Kms | | |
| 10 | Power | power situation in the State | | | | | | | | | | | | | |
| | | Rural Energisation | | | | | | | | | | | | | |
| 11 | Revenue | 11E Sketch pendency and Tathkal Podi Pendency | | | | | | | | | | Progress of Podi | Nos | | |
| | | | | | | | | | | | | No. of Applications completed | Nos | | |
| 12 | Health | National Rural Health Mission (NRHM) | | | | | | | | | | No. of Institutional Deliveries | Nos | | |
| | | | | | | | | | | | | Vaccination | Nos | | |
| 13 | Food & Civil Supplies | Anna Bhagya | | | | | | | | | | No. of beneficiaries | Nos | | |
| | | | | | | | | | | | | Offtake of Rice, Jowar & Ragi | Tonnes | | |
| 14 | Education | Implementation of RTE, SSA, RMSA & ICT-3 | | | | | | | | | | No. of Admissions | Nos | | |
| | | | | | | | | | | | | Amount disbursed to Schools | in Rs. | | |
| | WCD | ICDS | | | | | | | | | | | | | |
| 15 | Agriculture | Krishi Bhagya | | | | | | | | | | Construction of Farm Ponds | Nos | | |
| | | | | | | | | | | | | Supply of pumpsets | Nos | | |
| | | | | | | | | | | | | Supply of micro irrigation units | Nos | | |

| Sl. No. | Department | Scheme | Annual Outlay | OB | Total | Financial Progress | | | | | | Physical Progress | | | |
|---|---|---|---|---|---|---|---|---|---|---|---|---|---|---|---|
| | | | | | | Expenditure Upto End of Prev Month | | Expenditure during the Month | | Cumulative Expenditure upto End of the Month | | | | | |
| | | | | | | Release | Exp | Release | Exp | Release | Exp | Items | Unit | Target | Achievement |
| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 | 14 | 15 | 16 |
| | Agriculture | Ragi Special promotion scheme | | | | | | | | | | | | | |
| | | Bhoo Samruddhi | | | | | | | | | | | | | |
| 16 | Horticulture | National Horticulture Mission (NHM) [Integrated Horticulture Development] | | | | | | | | | | Supply of pack houses | Nos | | |
| | | | | | | | | | | | | Area Expansion | Ha | | |
| | | Rastriya krishi Vikas Yojane | | | | | | | | | | | | | |
| | | Pradhana Mantri Krishi Sinchayee Yojana (Micro Irrigation) | | | | | | | | | | | | | |
| | | Comprehensive Horticulture Development Programme | | | | | | | | | | | | | |
| 17 | Planning | Hyderabad Karnataka Region Development | | | | | | | | | | No. of works - Institutional Development | Nos | | |
| | | | | | | | | | | | | No. of works - Infrastructure Devp | Nos | | |
| | | Development of 39 Most Backward Taluks- | | | | | | | | | | No. of works - Institutional Development | Nos | | |
| | | | | | | | | | | | | No. of works - Infrastructure Devp | Nos | | |
| | | | | | | | | | | | | | | | |

**ಅನುಬಂಧ – 5**

**ಮುಖ್ಯಮಂತ್ರಿಯವರ ಸಚಿವಾಲಯದ ಅಧಿಕಾರಿಗಳು ಪ್ರತಿನಿಧಿಸುವ ಜಿಲ್ಲೆಗಳ ಪಟ್ಟಿ:**

| ಕ್ರ .ಸಂ | ಹೆಸರು | ಜಿಲ್ಲೆಗಳು |
|---|---|---|
| 1 | ಶ್ರೀ ಜಿಯಾಉಲ್ಲಾ, ಭಾ.ಆ.ಸೇ<br>ಮುಖ್ಯಮಂತ್ರಿಯವರ ಜಂಟಿ ಕಾರ್ಯದರ್ಶಿ | ಬೀದರ್, ಕಲಬುರಗಿ, ಯಾದಗಿರಿ, ಬಿಜಾಪುರ, ರಾಯಚೂರು ಮತ್ತು ಬಾಗಲಕೋಟೆ |
| 2 | ಶ್ರೀ ಹೀರಾ ನಾಯಕ್,<br>ಮುಖ್ಯಮಂತ್ರಿಯವರ ಆಪ್ತ ಕಾರ್ಯದರ್ಶಿ | ಬೆಂಗಳೂರು ಗ್ರಾಮಾಂತರ, ಬೆಂಗಳೂರು ನಗರ, ಚಿಕ್ಕಬಳ್ಳಾಪುರ, ಹಾಸನ ಮತ್ತು ಕೋಲಾರ |
| 3 | ಡಾ॥ ಹೆಚ್. ಸಿಂಧೆ ಭೀಮಸೇನರಾವ್,<br>ಮುಖ್ಯಮಂತ್ರಿಯವರ ಅಪರ ಕಾರ್ಯದರ್ಶಿ | ಶಿವಮೊಗ್ಗ, ಹಾವೇರಿ, ಚಿತ್ರದುರ್ಗ, ತುಮಕೂರು ಮತ್ತು ದಾವಣಗೆರೆ |
| 4 | ಶ್ರೀ. ಎಂ. ರಾಮಯ್ಯ<br>ಮುಖ್ಯಮಂತ್ರಿಯವರ ಜಂಟಿ ಕಾರ್ಯದರ್ಶಿ | ಮೈಸೂರು, ಮಂಡ್ಯ ಮತ್ತು ಚಾಮರಾಜನಗರ |
| 5 | ಶ್ರೀ ಗುತ್ತಿ ಜಂಬುನಾಥ್,<br>ಮುಖ್ಯಮಂತ್ರಿಯವರ ವಿಶೇಷ ಕರ್ತವ್ಯಾಧಿಕಾರಿ | ಕೊಪ್ಪಳ, ಬೆಳಗಾವಿ, ಬಳ್ಳಾರಿ, ಧಾರವಾಡ ಮತ್ತು ಗದಗ |
| 6 | ಶ್ರೀ ಧರೆಪ್ಪ ಪೂಜಾರ್,<br>ಮುಖ್ಯಮಂತ್ರಿಯವರ ವಿಶೇಷ ಕರ್ತವ್ಯಾಧಿಕಾರಿ | ಕೊಡಗು, ದಕ್ಷಿಣ ಕನ್ನಡ, ಉಡುಪಿ, ಚಿಕ್ಕಮಗಳೂರು ಮತ್ತು ಉತ್ತರಕನ್ನಡ |

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ೮) ೩೦೦ ಪ್ರತಿಗಳು)

*RNI No. KARBIL/2001/47147*

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

## ವಿಶೇಷ ರಾಜ್ಯ ಪತ್ರಿಕೆ



| | | |
|---|---|---|
| ಭಾಗ– *I* | ಬೆಂಗಳೂರು, ಶನಿವಾರ, ಅಕ್ಟೋಬರ್ ೩೧, ೨೦೧೫ (ಕಾರ್ತೀಕ ೦೯, ಶಕ ವರ್ಷ ೧೯೩೭) | ನಂ. ೧೧೫೦ |
| ***Part– I*** | ***Bengaluru, Saturday, October 31, 2015 (Kartheeka 09, Shaka Varsha 1937)*** | ***No. 1150*** |



**FORESTS, ECOLOGY AND ENVIRONMENT SECRETARIAT**

**PROCEEDINGS OF THE GOVERNMENT OF KARNATAKA**

**Sub:** Constitution of High Level Committee to examine the illegal encroachment of forest lands in Bengaluru Urban District.

**READ: 1)** Proceedings of the meeting held under the Chairmanship of Addl.Chief Secretary to Government, Forest Ecology and Environment Department on 05/08/2015 and 23/09/2015.

2) G.O. No.FEE 52 FGL 2013, dated 1.10.2015.

**PREAMBLE:-**

This is in continuation of joint meetings held on 5.8.2015 and 23.9.2015 with Principal Secretary, Revenue Department., Principal Chief Conservator of Forests (HoFF), Deputy Commissioner, Bengaluru Urban, Asst. Commissioner concerned and other senior officers of Forest and Revenue Departments. As per the decision of the meeting held on 5.8.2015, information in different categories encroachment of forest land (totaling 7) has been furnished and accordingly, a detailed letter was addressed to PCCF (HoFF) vide No.FEE 52 FGL 2013, dated 28.9.2015. Similarly another letter No.FEE 52 FGL 2013, dated 24.9.2015 was issued to PCCF (HoFF) and concerned officers in BDA, BBMP, IGR, DC, Bengaluru (Urban), Director, Town Planning, Commissioner, Survey Settlement & Land Records, CCF, Bengaluru Circle, DCF, Bengaluru Urban Divn., Asst. Commissioner, Bengaluru North Sub Divn, ACF, Bengaluru North Sub Divn, Tahsildar, BengaluruNorth Taluk and Sub-Registrar, Yelahanka with regard to Jakkur-Allalasandra Reserve Forest. As seen, there is a clear violation of Karnataka Forest Act, 1963 and Forest (Conservation) Act, 1980, in many of the cases. In the details furnished pertaining to different categories of Notified Forests in Bangalore Urban Division where violations have taken place, details of survey number, names of allottees / occupants are also available on record. In these circumstances and also in continuation of decisions taken in the meetings held under the Chairmanship of Addl.Chief Secretary, Forest, Ecology and Environment Department on05.08.2015 and 23.09.2015, Govt of Karnataka had constituted a Special Team to look into each of the case in detail and obtain and verify records, initiate suitable legal action beforevariousforums and take up enquiry under relevant provisions of Karnataka Forest Act, 1963 and Forest (Conservation) Act, 1980. Now, the Chief Secretary, in consultation with the Hon'ble Minister for Forest, Ecology & Environment has suggested to reconstitute a High Level Committee under the Chairmanship of Chief Secretary with the following members :

| | | |
|---|---|---|
| 1. | Chief Secretary to Government | Chairman |
| 2. | Addl. Chief Secretary, Forest, Ecology & Environment | Member |
| 3. | Addl.Chief Secretary/Principal Secretary, Urban Development | Member |
| 4. | Regional Commissioner, Bangalore Division,Bengaluru | Member |
| 5. | Principal Secretary, Revenue Dept | Member |
| 6. | Commissioner, BBMP | Member |
| 7. | Commissioner, BDA | Member |
| 8. | Commissioner, Survey Settlement & Land Records | Member |

9. Shri U.V. Singh, APCCF, KAMPA — Member
10. Chief Conservator of Forest, Bengaluru Circle — Member
11. Director, State Achieves — Member
12. Deputy CommissionerBengaluruUrban — Member
13. Deputy Commissioner, BengaluruRural — Member
14. Dy. Conservator of Forest, Bengaluru Urban — Member
15. Dy. Conservator of Forest, Bengaluru Rural — Member
16. Principal Chief Conservator of Forests (HoFF) — Member-Secretary

**GOVT. ORDER No: FEE52 FGL 2013, Bengaluru, DATED: 26/10/2015**

In the circumstances explained above, in supersession of the earlier Government Order No.FEE 52 FGL 2013, dated 1.10.2015 constituting a Special Team, the following Committee is constituted to restore the said lands in Bengaluru Urban Division to the Forest Department and addressing these contentious issues, it is necessary to constitute a High Level Committee to look into each of the case in detail and obtain and verify records, initiate suitable legal action before various forums and taking up enquiry under relevant provisions of Karnataka Forest Act, 1963 and Forest (Conservation) Act, 1980 Government decided constitute a High Level Committee with the following members :

1. Chief Secretary to Government — Chairman
2. Addl. Chief Secretary, Forest, Ecology & Environment — Member
3. Addl.Chief Secretary/Principal Secretary,Urban Development — Member
4. Regional Commissioner, Bengaluru Division, Bengaluru — Member
5. Principal Secretary, Revenue Dept — Member
6. Commissioner, BBMP — Member
7. Commissioner, BDA — Member
8. Commissioner, Survey Settlement & Land Records — Member
9. Shri U.V. Singh, APCCF, KAMPA — Member
10. Chief Conservator of Forest, Bengaluru Circle — Member
11. Director, State Achieves — Member
12. Deputy Commissioner, Bengaluru Urban — Member
13. Deputy Commissioner, Bengaluru Rural — Member
14. Dy. Conservator of Forest, Bengaluru Urban — Member
15. Dy. Conservator of Forest, Bengaluru Rural — Member
16. Principal Chief Conservator of Forests (HoFF) — Member-Secretary

Terms of Reference of the Committee:

1. To examine Notifications declaring the area as Reserve Forests and any subsequent documents denotifying / granting the said forest lands to Organizations / Private Individuals, if any.
2. To obtain necessary records from Achieves, Revenue and Forest Department and other relevant sources and verify the same.
3. To conduct field visits and physical verification as and when required.
4. To suggest a way forward.

2. The term of the Committee is for a period of **one year** and the said committee should meet as frequently as possible and a report be submitted every quarter to Government.

By order and in the name of the Governor of Karnataka,

**L. SHARADA**
Under Secretary to Government
Forests, Ecology and Environment Department

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿಠ) (೧೦೦ ಪ್ರತಿಗಳು)

RNI No. KARBIL/2001/47147

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

## ವಿಶೇಷ ರಾಜ್ಯ ಪತ್ರಿಕೆ


| ಭಾಗ– III | ಬೆಂಗಳೂರು, ಮಂಗಳವಾರ, ಅಕ್ಟೋಬರ್ ೦೬, ೨೦೧೫ (ಆಶ್ವಯುಜ ೧೪, ಶಕ ವರ್ಷ ೧೯೩೭) | ನಂ. ೧೧೦೧ |
|---|---|---|
| Part–III | Bengaluru, Tuesday, October 06, 2015 (Aashwayuja 14, Shaka Varsha 1937) | No. 1101 |


**ಕರ್ನಾಟಕ ರಾಜ್ಯ ಚುನಾವಣಾ ಆಯೋಗದ ನಡವಳಿಗಳು.**

**ರಾಜ್ಯ ಚುನಾವಣಾ ಆಯೋಗ, ಬೆಂಗಳೂರು**

**ವಿಷಯ:** ಗ್ರಾಮ/ತಾಲ್ಲೂಕು/ಜಿಲ್ಲಾ ಪಂಚಾಯಿತಿ ಚುನಾವಣೆಗಳಲ್ಲಿ ತನ್ನ ಮತವನ್ನು ಸ್ಪರ್ಧಿಸಿರುವ ಯಾವುದೇ ಅಭ್ಯರ್ಥಿಗೆ ನೀಡದೆಯೇ ತನ್ನ ಇಚ್ಛಾನುಸಾರ "ಮೇಲ್ಕಂಡ ಯಾರೂ ಅಲ್ಲ"/(ಮೇ.ಯಾ.ಅ.)/(NOTA)ಗೆ ತನ್ನ ಮತವನ್ನು ಚಲಾಯಿಸಲು ಅವಕಾಶ ಕಲ್ಪಿಸುವ ಬಗ್ಗೆ.

**ಓದಲಾಗಿದೆ:** ಸರ್ಕಾರದ ಅಧಿಸೂಚನೆ ಸಂಖ್ಯೆ: ಸಂವ್ಯಶಾಇ 26 ಶಾಸನ 2015 ದಿ.30.04.2015

–0–0–0–0–

**ಪ್ರಸ್ತಾವನೆ:**

ಮೇಲೆ ಓದಲಾದ ಅಧಿಸೂಚನೆಯಲ್ಲಿ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ, 1993ರ ಪಕ್ರಣ 9, 125, ಹಾಗೂ 164ಕ್ಕೆ ತಿದ್ದುಪಡಿ ಮಾಡಿದ್ದು, ಸದರಿ ಪ್ರಕರಣಗಳಿಗೆ ಉಪ ಪ್ರಕರಣ(3) ಮತ್ತು (4)ನ್ನು ಸೇರ್ಪಡೆ ಮಾಡಿದೆ. ಉಪ ಪ್ರಕರಣ (3) ಹಾಗೂ (4) ಈ ಕೆಳಕಂಡಂತಿದೆ.

"(3)ಪಂಚಾಯಿತಿಯ ಚುನಾವಣೆಯಲ್ಲಿ ಮತನೀಡುವುದು ಗ್ರಾಮ/ ತಾಲ್ಲೂಕು/ ಜಿಲ್ಲಾ ಪಂಚಾಯಿತಿಯ ಮತದಾರರ ಪಟ್ಟಿಯಲ್ಲಿ ತನ್ನ ಹೆಸರು ಇರುವ ಪ್ರತಿಯೊಬ್ಬ ವ್ಯಕ್ತಿಯ ಕರ್ತವ್ಯವಾಗಿರತಕ್ಕದ್ದು ಮತ್ತು ಅದು ಕಡ್ಡಾಯವಾಗಿರತಕ್ಕದ್ದು. ಆದಾಗ್ಯೂ (4)ನೇ ಉಪಪ್ರಕರಣದಲ್ಲಿ ಸೂಚಿಸಿದಂತೆ ಆತನು ತನ್ನ ಮತವನ್ನು ಚುನಾವಣೆಯಲ್ಲಿ ಸ್ಪರ್ಧಿಸಿರುವ ಅಭ್ಯರ್ಥಿಗಳ ಪರವಾಗಿ ನೀಡದೆಯೇ ಚಲಾಯಿಸಲು ಸ್ವತಂತ್ರನಾಗಿರತಕ್ಕದ್ದು.

(4)ಚುನಾವಣಾ ಆಯುಕ್ತರು ಸೂಕ್ತ ಉಪಬಂಧವನ್ನು ಕಲ್ಪಿಸಿದರೆ, ಆತನು ಯಾವುದೇ ಅಭ್ಯರ್ಥಿಯ ಪರವಾಗಿ ಮತ ನೀಡಲು ಬಯಸದಿದ್ದ ಪಕ್ಷದಲ್ಲಿ, ಅರ್ಹ ಮತದಾರನು ತನ್ನ ಮತವನ್ನು ಚುನಾವಣೆಯಲ್ಲಿ ಸ್ಪರ್ಧಿಸಿರುವ ಅಭ್ಯರ್ಥಿಗಳ ಪರವಾಗಿ ನೀಡದೆಯೇ ಚಲಾಯಿಸತಕ್ಕದ್ದು."

ಕರ್ನಾಟಕ ಪಂಚಾಯತ್ ರಾಜ್ (ಚುನಾವಣೆ ನಡೆಸುವ) ನಿಯಮಗಳು, 1993ರ ನಿಯಮ–99ರಲ್ಲಿ, ಮತದಾರನು ಮತಗಟ್ಟೆಗೆ ಬಂದ ನಂತರ ಮತ ಚಲಾಯಿಸದಿರಲು ನಿರ್ಧರಿಸುವುದಕ್ಕೆ ಅವಕಾಶ ಇದೆಯಾದರೂ ತನ್ನ ಇಚ್ಛೆಯನ್ನು ಮತ ಚಲಾಯಿಸುವ ಮೂಲಕ ವ್ಯಕ್ತಪಡಿಸಲು ಅವಕಾಶ ಇರುವುದಿಲ್ಲ.

ಕರ್ನಾಟಕ ಪಂಚಾಯತ್ ರಾಜ್ (ಚುನಾವಣೆ ನಡೆಸುವ) ನಿಯಮಗಳು, 1993ರ ನಿಯಮ–35ರಂತೆ ರಾಜ್ಯ ಚುನಾವಣಾ ಆಯೋಗಕ್ಕೆ ಮತಪತ್ರದ ನಮೂನೆ, ಹಾಗೂ ಭಾಷೆಗಳನ್ನು ನಿರ್ದೇಶಿಸಲು ಅವಕಾಶವಿರುತ್ತದೆ.

ಮೇಲ್ಕಂಡ ಎಲ್ಲಾ ಅಂಶಗಳನ್ನು ಪರಿಗಣಿಸಿ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ, 1993ರ ಪ್ರಕರಣ–9, 125 ಹಾಗೂ 164ರಂತೆ ಮತದಾರನು ಚುನಾವಣೆಯಲ್ಲಿ ತನ್ನ ಇಚ್ಛೆಯಂತೆ 'ಯಾರೊಬ್ಬರಿಗೂ ತನ್ನ ಮತ ನೀಡಲು ಇಚ್ಛೆ ಇರುವುದಿಲ್ಲ' ಎಂಬ ತನ್ನ ತೀರ್ಮಾನವನ್ನು ರಹಸ್ಯವಾಗಿ ಮತ ಚಲಾಯಿಸುವ ಮೂಲಕ ವ್ಯಕ್ತಪಡಿಸಲು ಮತಪತ್ರದಲ್ಲಿ/ಇವಿಎಂನಲ್ಲಿ ಸೂಕ್ತ ಅವಕಾಶಗಳನ್ನು ಕಲ್ಪಿಸಲು ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ರಾಚುಆ: 248:ಇಜಿಪಿ:2015, ಬೆಂಗಳೂರು, ದಿನಾಂಕ: 06–10–2015**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ, ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ, 1993ರ ಪ್ರಕರಣ–9, 125 ಮತ್ತು 164ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ರಾಜ್ಯ ಚುನಾವಣಾ ಆಯೋಗವು ಗ್ರಾಮ, ತಾಲ್ಲೂಕು ಮತ್ತು ಜಿಲ್ಲಾ ಪಂಚಾಯಿತಿ ಚುನಾವಣೆಗಳಲ್ಲಿ, ಮತದಾರರ ಪಟ್ಟಿಯಲ್ಲಿ ತನ್ನ ಹೆಸರು ಇರುವ ವ್ಯಕ್ತಿಯು, ತನ್ನ ಮತವನ್ನು

ಸ್ಪರ್ಧಿಸಿರುವ ಅಭ್ಯರ್ಥಿಗಳ ಪರವಾಗಿ ನೀಡದೆಯೇ ತನ್ನ ಇಚ್ಛಾನುಸಾರ ಚಲಾಯಿಸಲು, ಅನುವಾಗುವಂತೆ ಮತಪತ್ರದಲ್ಲಿ / ಅಂಚೆ ಮತಪತ್ರದಲ್ಲಿ /ಇ.ವಿ.ಎಂ.ನಲ್ಲಿ ಸ್ಪರ್ಧಿಸುವ ಅಭ್ಯರ್ಥಿಗಳ ಹೆಸರಿನ ಕೊನೆಯ ಸಾಲು ಅಥವಾ ಕೊನೆಯ ಪ್ಯಾನೆಲ್‌ನಲ್ಲಿ 'None of the Above' (NOTA) / "ಮೇಲ್ಕಂಡ ಯಾರೂ ಅಲ್ಲ" (ಮೇ ಯಾ ಅ) ಎಂದು ಮುದ್ರಿಸಿ, ಪ್ರತ್ಯೇಕ ಕಾಲಂ ನಲ್ಲಿ ಅವಕಾಶ ಕಲ್ಪಿಸಲು ಆದೇಶಿಸಿದೆ.

ಗ್ರಾಮ/ ತಾಲ್ಲೂಕು/ ಜಿಲ್ಲಾ ಪಂಚಾಯಿತಿ ಮತದಾರರು ಇನ್ನು ಮುಂದೆ ಗ್ರಾಮ/ ತಾಲ್ಲೂಕು/ ಜಿಲ್ಲಾ ಪಂಚಾಯಿತಿ ಚುನಾವಣೆಗಳಲ್ಲಿ ತಮ್ಮ ಇಚ್ಛಾನುಸಾರ ಸ್ಪರ್ಧಿಸಿರುವ ಯಾವುದೇ ಅಭ್ಯರ್ಥಿಗೆ ಅಥವಾ 'None of the Above' (NOTA) / "ಮೇಲ್ಕಂಡ ಯಾರೂ ಅಲ್ಲ" (ಮೇ ಯಾ ಅ)ಗೆ ತನ್ನ ಮತವನ್ನು ಚಲಾಯಿಸಬಹುದಾಗಿರುತ್ತದೆ.

ಈ ಬಗ್ಗೆ ಚುನಾವಣಾಧಿಕಾರಿಗಳ ಕೈಪಿಡಿಯಲ್ಲಿ ಹಾಗೂ ಚುನಾವಣೆಗೆ ಸಂಬಂಧಿಸಿದ ನಮೂನೆಯಲ್ಲಿ ಸೂಕ್ತ ತಿದ್ದುಪಡಿಗಳನ್ನು ಹಾಗೂ ತತ್ಸಂಬಂಧದ ಸೂಚನೆಗಳನ್ನು ಪ್ರತ್ಯೇಕವಾಗಿ ಹೊರಡಿಸಲಾಗುವುದು.

ಮೇಲ್ಕಂಡ 'NOTA' / 'ಮೇ ಯಾ ಅ' ಅವಕಾಶವು ಮುಂದಿನ ಎಲ್ಲಾ ಗ್ರಾಮ/ ತಾಲ್ಲೂಕು/ ಜಿಲ್ಲಾ ಪಂಚಾಯಿತಿ ಸಾರ್ವತ್ರಿಕ ಚುನಾವಣೆ/ಉಪ ಚುನಾವಣೆಗಳಿಗೆ ಜಾರಿಗೆ ಬರುತ್ತದೆ.

ಮಾನ್ಯ ಆಯುಕ್ತರ ಆದೇಶದ ಮೇರೆಗೆ

**ಆರ್. ಚಂದ್ರಶೇಖರ್**
ಅಧೀನ ಕಾರ್ಯದರ್ಶಿ
ರಾಜ್ಯ ಚುನಾವಣಾ ಆಯೋಗ

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ೩) 50 ಪ್ರತಿಗಳು)

RNI No. KARBIL/2001/47147

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

**ವಿಶೇಷ ರಾಜ್ಯ ಪತ್ರಿಕೆ**



| ಭಾಗ– III | ಬೆಂಗಳೂರು, ಗುರುವಾರ, ಅಕ್ಟೋಬರ್ ೦೮, ೨೦೧೫ (ಆಶ್ವಯುಜ ೧೬, ಶಕ ವರ್ಷ ೧೯೩೭) | ನಂ. ೧೧೦೨ |
|---|---|---|
| Part–III | Bengaluru, Thursday, October 08, 2015 (Aashwayuja 16, Shaka Varsha 1937) | No. 1102 |



**ನಗರಾಭಿವೃದ್ಧಿ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ನಅಇ 57 ಎಂಎಲ್ಆರ್ 2015, ಬೆಂಗಳೂರು, ದಿನಾಂಕ: 08.10.2015**

ಕರ್ನಾಟಕ ಪೌರಸಭೆಗಳ ಕಾಯ್ದೆ 1964ರ 9ನೇ ಪ್ರಕರಣದಲ್ಲಿ ಅಗತ್ಯಪಡಿಸಿದಂತೆ ಕೊಪ್ಪಳ ಜಿಲ್ಲೆಯ ಭಾಗ್ಯನಗರ ಗ್ರಾಮ ಪಂಚಾಯಿತಿ ಪ್ರದೇಶವನ್ನು 'ಭಾಗ್ಯನಗರ ಪರಿವರ್ತನಾ ಪ್ರದೇಶ'ವೆಂದೂ ಹಾಗೂ ಸದರಿ ಪರಿವರ್ತನಾ ಪ್ರದೇಶವನ್ನು 'ಭಾಗ್ಯನಗರ ಪಟ್ಟಣ ಪಂಚಾಯಿತಿ'ಯ ಪ್ರದೇಶವೆಂದು ನಿರ್ದಿಷ್ಟಪಡಿಸಲು ಪ್ರಸ್ತಾಪಿಸಿ, ಸರ್ಕಾರದ ಅಧಿಸೂಚನೆ ಸಂಖ್ಯೆ ನಅಇ 57 ಎಂಎಲ್ಆರ್ 2015, ದಿನಾಂಕ: 30–04–2015ನ್ನು ದಿನಾಂಕ:30–04–2015ರ ಕರ್ನಾಟಕ ವಿಶೇಷ ರಾಜ್ಯ ಪತ್ರದ ಭಾಗ–3ರ ಸಂಖ್ಯೆ: 393ರಲ್ಲಿ ಪ್ರಕಟಿಸಿ, ಇದರಿಂದ ಬಾಧಿತರಾಗಬಹುದಾದ ವ್ಯಕ್ತಿಗಳಿಂದ ಸದರಿ ಅಧಿಸೂಚನೆಯನ್ನು ಪ್ರಕಟಿಸಿದ ದಿನಾಂಕದಿಂದ ಮೂವತ್ತು ದಿನಗಳೊಳಗಾಗಿ ಆಕ್ಷೇಪಣೆಗಳನ್ನು ಆಹ್ವಾನಿಸಲಾಗಿ;

ಸದರಿ ರಾಜ್ಯ ಪತ್ರವನ್ನು ಪ್ರಕಟಿಸಿದ ದಿನಾಂಕದಂದು ಸಾರ್ವಜನಿಕರಿಗೆ ಲಭ್ಯವಾಗುವಂತೆ ಮಾಡಿ;

ನಿಗದಿತ ಅವಧಿಯಲ್ಲಿ ಸ್ವೀಕೃತವಾದ ಆಕ್ಷೇಪಣೆಗಳನ್ನು ಪರಿಶೀಲಿಸಲಾಗಿರುವುದರಿಂದ;

ಕರ್ನಾಟಕ ಪೌರಸಭೆಗಳ ಕಾಯ್ದೆ 1964ರ 349 ನೇ ಪ್ರಕರಣದೊಂದಿಗೆ ಓದಿಕೊಂಡ 351 ಮತ್ತು 355–ಬಿ ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ರಾಜ್ಯಪಾಲರು ಈ ಕೆಳಗಿನವುಗಳನ್ನು ಗಮನಿಸಿ, 'ಅನುಸೂಚಿ ಎ' ಮತ್ತು 'ಅನುಸೂಚಿ ಬಿ' ಯಲ್ಲಿ ನಿರ್ದಿಷ್ಟಪಡಿಸಲಾದ ಪರಿಮಿತಿಯುಳ್ಳ ಕೊಪ್ಪಳ ಜಿಲ್ಲೆಯ ಭಾಗ್ಯನಗರ ಗ್ರಾಮ ಪಂಚಾಯಿತಿ ಪ್ರದೇಶವನ್ನು 'ಭಾಗ್ಯನಗರ ಪರಿವರ್ತನಾ ಪ್ರದೇಶ'ವೆಂದೂ ಹಾಗೂ ಸದರಿ ಪರಿವರ್ತನಾ ಪ್ರದೇಶವನ್ನು 'ಭಾಗ್ಯನಗರ ಪಟ್ಟಣ ಪಂಚಾಯಿತಿ'ಯ ಪ್ರದೇಶವೆಂದು ಸಹ ಪದನಾಮೀಕರಿಸಿ, ರಾಜ್ಯಪತ್ರದಲ್ಲಿ ಪ್ರಕಟಿಸಲಾದ ದಿನಾಂಕದಿಂದ ಜಾರಿಗೆ ಬರುವಂತೆ ಈ ಮೂಲಕ ಉದ್ಘೋಷಿಸಿರುತ್ತಾರೆ–

i. ಅಂಥ ಪ್ರದೇಶದ ಜನಸಂಖ್ಯೆ ಹತ್ತು ಸಾವಿರಕ್ಕಿಂತ ಕಡಿಮೆಯಿಲ್ಲದ ಮತ್ತು ಇಪ್ಪತ್ತು ಸಾವಿರಕ್ಕಿಂತ ಹೆಚ್ಚಿಲ್ಲದ;

ii. ಅಂಥ ಪ್ರದೇಶದಲ್ಲಿನ ಜನಸಂಖ್ಯೆಯ ಸಾಂದ್ರತೆಯು ಒಂದು ಚದರ ಕಿಲೋಮೀಟರ್ ಪ್ರದೇಶಕ್ಕೆ ನಾಲ್ಕುನೂರು ನಿವಾಸಿಗಳಿಗಿಂತ ಕಡಿಮೆಯಿಲ್ಲದ ಹೊರತು:–

iii. ಕೃಷಿಯೇತರ ಚಟುವಟಿಕೆಗಳಲ್ಲಿನ ಉದ್ಯೋಗದ ಶೇಕಡಾವಾರು ಒಟ್ಟು ಉದ್ಯೋಗದ ಶೇಕಡ ಐವತ್ತಕ್ಕಿಂತ ಕಡಿಮೆಯಿಲ್ಲದ ಹೊರತು ಪರಿವರ್ತನಾ ಪ್ರದೇಶವೆಂಬುದಾಗಿ ಹಾಗೆ ನಿರ್ದಿಷ್ಟಪಡಿಸತಕ್ಕದಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿದ್ದಿಕ್ ಪಾಷ**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ

**ಅನುಬಂಧ–ಎ**
**ಭಾಗ್ಯನಗರ**
**ಅನುಬಂಧ–ಬಿ**

**ಪೂರ್ವದಿಕ್ಕಿಗೆ** **ಸರ್ವೆ ನಂ.** 727/2, 69.728,72265/1,54 ಸರ್ಕಾರಿ ಮೆಡಿಕಲ್ ಕಾಲೇಜ್‌ವರೆಗೆ ವಿಸ್ತರಿಸಿದೆ.
**ಪಶ್ಚಿಮದಿಕ್ಕಿಗೆ** **ಸರ್ವೆ ನಂ.** 701, 704, 705, 699/1, 699/2, 699/3 ಶ್ರೀ ಕರಿಬಸವೇಶ್ವರ ದೇವಾಸ್ಥಾನದ ವರೆಗೆ ವಿಸ್ತರಿಸಿದೆ.
**ಉತ್ತರದಿಕ್ಕಿಗೆ** **ಸರ್ವೆ ನಂ.** 719,147,718,151,146,161 ಒಜಿನಹಳ್ಳಿ ಸೀಮಾದವರೆಗೆ ವಿಸ್ತರಿಸಿದೆ.
**ದಕ್ಷಿಣದಿಕ್ಕಿಗೆ** **ಸರ್ವೆ ನಂ.** 692/1/2/3,690/1/2 ಶ್ರೀ ತಾಯಮ್ಮ ದೇವಿ ದೇವಾಸ್ಥಾನ ಮತ್ತು ಸಾಯಿಬಾಬಾ ದೇವಾಸ್ಥಾನದ ವರೆಗೆ ವಿಸ್ತರಿಸಿದೆ.

**ಸಿದ್ದಿಕ್ ಪಾಷ**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ

**URBAN DEVELOPMENT SECRETARIAT**
**NOTIFICATION**
**No.UDD 57 MLR 2015, Bengaluru, Dated: 08.10.2015**

Whereas the notification of declaring 'Gram Panchayat Area' of Bhagyanagar, mentioned in Schedule "A" along with boundaries mentioned in Scheduled "B" as the "Transitional Area" of Bhagyanagar and further specifying such area to be the "Town Panchayath Area" of Bhagyanagar was published as required by Section 9 of the Karnataka Municipalities Act 1964, vide 'Government notification No. UDD 57 MLR 2015, dated:30-04-2015 in part- III, No.393 of Karnataka Gazette Extraordinary, dated: 30-04-2015 inviting objections from all persons likely to be affected thereby on or before thirty days from the date of publication of the above notification.

And whereas the notification was made available to the public on the day of publication;

And whereas objections were received within the stipulated time have been examined;

Now, therefore, in exercise of the powers conferred by Section 349 read with Section 351 and 355-B of the Karnataka Municipalities Act 1964, the Hon'ble Governor, hereby notify 'Gram Panchayat Area' of Bhagyanagar in Koppal District, mentioned in Schedule "A" along with boundaries mentioned in Scheduled "B" as the "**Transitional Area" of Bhagyanagar** and further specify such area to be the "**Town Panchayath Area" of Bhagyanagar** with effect from the date of publishing in the official gazette, having regard to-

i. The population of such area is not less than ten thousand and not more than Twenty thousand;
ii. The density of population in such area is not less than four hundred inhabitants to one square kilometer of area;
iii. The percentage of employment in non-agricultural activities is not less than fifty per cent of the total employment;

By Order and in the name of the Governor of Karnataka

**SIDDIQ PASHA**
Under Secretary to Government
Urban Development Department

**Annexure-A**
**Bhagyanagar**
**Annexure – B**

**Bhagyanagar.**Village Grama Thana to the

**East** side village boundary **Survey No.** 727/2 ,69, 728, 72, 265/1, 54, ends at boundary
**West** **Survey No**.701, 704, 705, 699/1, 699/2, 699/3**,** ends at boundary
**North** **SurveyNo.** 719, 147, 718, 151,146, 161, 720, crossed at boundary
**South** **SurveyNo,**692/1,2,3,690/1,2 ,ends at boundary
**<u>Note:</u>** East construction medical college to West Sri Karibasweshawara Temple boundary and North Ojanahalli border land to Sri thayamma Devi temple and Sai baba temple ends to boundary.

**SIDDIQ PASHA**
Under Secretary to Government
Urban Development Department

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿಠ) 100 ಪ್ರತಿಗಳು)

*RNI No. KARBIL/2001/47147*

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

## ವಿಶೇಷ ರಾಜ್ಯ ಪತ್ರಿಕೆ



| ಭಾಗ– III | ಬೆಂಗಳೂರು, ಗುರುವಾರ, ಅಕ್ಟೋಬರ್ ೦೮, ೨೦೧೫ (ಆಶ್ವಯುಜ ೧೬, ಶಕ ವರ್ಷ ೧೯೩೭) | ನಂ. ೧೧೦೫ |
|---|---|---|
| *Part–III* | *Bengaluru, Thursday, October 08, 2015 (Aashwayuja 16, Shaka Varsha 1937)* | *No. 1105* |



**ನಗರಾಭಿವೃದ್ಧಿ ಸಚಿವಾಲಯ**

**ತಿದ್ದುಪಡಿ**

**ಸಂಖ್ಯೆ: ನಅಇ 08 ಎಂಎಲ್‌ಆರ್ 2015, ಬೆಂಗಳೂರು, ದಿನಾಂಕ: 08–10–2015**

ಯಾದಗಿರಿ ಜಿಲ್ಲೆಯ ಸುರಪುರ ತಾಲ್ಲೂಕಿನ ಕೆಂಭಾವಿ ಗ್ರಾಮ ಪಂಚಾಯಿತಿಯನ್ನು ಪುರಸಭೆಯನ್ನಾಗಿ ಮೇಲ್ದರ್ಜೆಗೇರಿಸಿ ಹೊರಡಿಸಿರುವ ಅಧಿಸೂಚನೆ ಸಂಖ್ಯೆ: ನಅಇ 08 ಎಂಎಲ್‌ಆರ್ 2015, ದಿನಾಂಕ: 23–07–2015ರ ಎಲ್ಲಾ ಭಾಗಗಳಲ್ಲಿ ಕೆಂಭಾವಿ ಗ್ರಾಮ ಪಂಚಾಯಿತಿ, ಪರಸನಹಳ್ಳಿ ಮತ್ತು ಪತ್ತೇಪುರ ಎಂದು ನಮೂದಿಸಿರುವುದರ ಬದಲಾಗಿ **"ಕೆಂಭಾವಿ ಗ್ರಾಮ ಪರಸನಹಳ್ಳಿ ಮತ್ತು ಪತ್ತೇಪುರ"** ಎಂದು ತಿದ್ದಿಕೊಂಡು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಸಿದ್ದಿಕ್ ಪಾಷ**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ8) 100 ಪ್ರತಿಗಳು)

*RNI No. KARBIL/2001/47147*

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

## ವಿಶೇಷ ರಾಜ್ಯ ಪತ್ರಿಕೆ

| ಭಾಗ– III | ಬೆಂಗಳೂರು, ಸೋಮವಾರ, ಅಕ್ಟೋಬರ್ ೧೯, ೨೦೧೫ (ಆಶ್ವಯುಜ ೨೭, ಶಕ ವರ್ಷ ೧೯೩೭) | ನಂ. ೧೧೨೦ |
|---|---|---|
| *Part–III* | *Bengaluru, Monday, October 19, 2015 (Aashwayuja 27, Shaka Varsha 1937)* | *No. 1120* |


**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ**

**ಅಧಿಸೂಚನೆ**

ನಂ. ಚುನಾವಣೆ.ಸಿ.ಆರ್:91–1/2014.15, ದಿನಾಂಕ:16.10.2015

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ ಮತ್ತು ಅಭಿವೃದ್ಧಿ) ನಿಯಮಗಳು 1968ರ 7ನೇ ನಿಯಮದ ಚಿತ್ರದುರ್ಗ ಜಿಲ್ಲೆಯ ಹೊಸದುರ್ಗ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಚುನಾವಣೆ ನಡೆಸಲು ಕಚೇರಿಯ ಚುನಾವಣಾ ನೋಟೀಸು ಪತ್ರದ ನಂ.ಚುನಾವಣೆ.ಸಿ.ಆರ್:91/2014.15 ದಿನಾಂಕ:18.09.2015 ರಲ್ಲಿ ಚುನಾವಣಾ ನೋಟೀಸನ್ನು ನೀಡಿ, ದಿನಾಂಕ:21.09.2015ರಲ್ಲಿ ಪರಿಷ್ಕೃತ ಚುನಾವಣಾ ನೋಟೀಸ್ ಹೊರಡಿಸಲಾಗಿದ್ದು, ದಿನಾಂಕ:14.10.2015ರಂದು ಮತದಾನ ನಡೆದು ಚುನಾವಣಾಧಿಕಾರಿಗಳು ಚುನಾವಣೆಯ ಫಲಿತಾಂಶವನ್ನು ದಿನಾಂಕ:16.10.2015ರಂದು ಘೋಷಿಸಿರುತ್ತಾರೆ. ಪ್ರಯುಕ್ತ ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ 1966ರ ಕಲಂ 27ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ **ಎಂ.ಕೆ.ಶ್ರೀರಂಗಯ್ಯ**, ಜಿಲ್ಲಾಧಿಕಾರಿ, ಚಿತ್ರದುರ್ಗ ಜಿಲ್ಲೆ ಆದ ನಾನು **ಹೊಸದುರ್ಗ** ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಆಯ್ಕೆಗೊಂಡ ಈ ಕೆಳಕಂಡ ಸದಸ್ಯರ ಹೆಸರುಗಳನ್ನು ಅಧಿಸೂಚಿಸಿರುತ್ತೇನೆ.

| ಕ್ರಸಂ | ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯ ಕ್ಷೇತ್ರದ ಹೆಸರು | ಮೀಸಲಾತಿ ವಿವರ | ಆಯ್ಕೆಗೊಂಡ ಸದಸ್ಯರ ಹೆಸರು & ವಿಳಾಸ ಶ್ರೀ/ಶ್ರೀಮತಿ |
|---|---|---|---|
| 1 | ಆನಿವಾಳ | ಹಿಂದುಳಿದ (ಬ) ವರ್ಗ | ಹೆಚ್.ಸಿ.ಮಲ್ಲಿಕಾರ್ಜುನ ಬಿನ್ ಲೇ॥ ಪಟೇಲ್ ಚಂದಪ್ಪ, ಹೆಬ್ಬಳ್ಳಿ ಅಂಚೆ, ಹೊಸದುರ್ಗ ತಾ॥. |
| 2 | ಮಧುರೆ | ಅನುಸೂಚಿತ ಜಾತಿ | ಕೆ.ಹನುಮಾನಾಯ್ಕ ಬಿನ್ ಕೃಷ್ಣಾನಾಯ್ಕ, ಗುತ್ತಿಕಟ್ಟೆ ಲಂಬಾಣಿಹಟ್ಟಿ, ಹೊಸದುರ್ಗ ತಾ॥. |
| 3 | ಜಾನಕಲ್ | ಅನುಸೂಚಿತ ಪಂಗಡ | ತಳವಾರ ತಿಪ್ಪೇರುದ್ರಪ್ಪ ಬಿನ್ ರಂಗಪ್ಪ, ಹೊನ್ನೇನಹಳ್ಳಿ, ಹೊಸದುರ್ಗ ತಾ॥. |
| 4 | ಮಾಡದಕೆರೆ | ಸಾಮಾನ್ಯ | ಎಸ್. ಹರೀಶ್ ಬಿನ್ ಸಿದ್ದಪ್ಪ, ಕೆಂಕೆರೆ, ಹೊಸದುರ್ಗ ತಾ॥. |
| 5 | ಹೊಸದುರ್ಗ | ಸಾಮಾನ್ಯ | ಹೆಚ್.ಸಿ.ಮಹಾಲಿಂಗಸ್ವಾಮಿ ಬಿನ್ ಹೆಚ್.ಸಿ.ಚಂದ್ರಶೇಖರಯ್ಯ, ವೀರಭದ್ರ ದೇವಸ್ಥಾನದ ಹತ್ತಿರ, ಹೊಸದುರ್ಗ. |
| 6 | ಬೋಕಿಕೆರೆ | ಸಾಮಾನ್ಯ | ಜಿ.ಶಿವಾನಂದ ಬಿನ್ ಗೋವಿಂದಪ್ಪ, ಹೊಸದುರ್ಗ ಟೌನ್ |
| 7 | ಮಾರಬಗಟ್ಟ | ಸಾಮಾನ್ಯ | ಜೆ. ಲಿಂಗೇಶ್ವರ ಬಿನ್ ಜಲಜಾಕ್ಷಪ್ಪ, ಮಾರಬಗಟ್ಟ ಅಂಚೆ, ಹೊಸದುರ್ಗ ತಾ॥. |
| 8 | ಬೆಲಗೂರು | ಮಹಿಳೆ | ಪ್ರೇಮಕುಮಾರಿ ಕೋಂ ಬಿ.ಪಿ.ಪ್ರಸನ್ನಕುಮಾರ್, ಬೆಲಗೂರು, ಹೊಸದುರ್ಗ ತಾ॥. |
| 9 | ದೊಡ್ಡತೇಕಲವಟ್ಟಿ | ಸಾಮಾನ್ಯ | ಆರ್.ಸಣ್ಣರಂಗಪ್ಪ ಬಿನ್ ಸೂಪ್ರಿರಂಗಪ್ಪ, ಎಸ್.ನೇರಲಕೆರೆ, ಹೊಸದುರ್ಗ ತಾ॥. |

| ಕ್ರ.ಸಂ | ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯ ಕ್ಷೇತ್ರದ ಹೆಸರು | ಮೀಸಲಾತಿ ವಿವರ | ಆಯ್ಕೆಗೊಂಡ ಸದಸ್ಯರ ಹೆಸರು & ವಿಳಾಸ ಶ್ರೀ/ಶ್ರೀಮತಿ |
|---|---|---|---|
| 10 | ಮತ್ತೋಡು | ಸಾಮಾನ್ಯ | ಭೈರಪ್ಪ ಬಿನ್ ದೊಡ್ಡಮೂಡ್ಲಪ್ಪ, ಲಕ್ಷ್ಮೀದೇವರಹಳ್ಳಿ, ಹೊಸದುರ್ಗ ತಾ॥. |
| 11 | ಶ್ರೀರಾಂಪುರ | ಹಿಂದುಳಿದ (ಅ) ವರ್ಗ | ಹೆಚ್.ಜಿ.ಶಿವಣ್ಣ ಬಿನ್ ಹೆಚ್.ಗೊರವಪ್ಪ, ಶ್ರೀರಾಂಪುರ, ಹೊಸದುರ್ಗ ತಾ॥. |
| 12 | ವರ್ತಕರ ಕ್ಷೇತ್ರ | ಸಾಮಾನ್ಯ | ಎ.ಟಿ. ಕುಮಾರಸ್ವಾಮಿ ಬಿನ್ ಅರೇತಿಮ್ಮಪ್ಪ, ಹೊನ್ನೇಕೆರೆ, ಹೊಸದುರ್ಗ ತಾ॥. |
| 13 | ಸಹಕಾರ ಮಾರುಕಟ್ಟೆ ವ್ಯವಹಾರ ಸಂಘಗಳ ಕ್ಷೇತ್ರ | ಸಾಮಾನ್ಯ | ಕೆ. ಸಣ್ಣರಂಗಪ್ಪ ಬಿನ್ ಪಟೇಲ್ ಕಟ್ಟಪ್ಪ, ಎಸ್.ನೇರಲಕೆರೆ, ಹೊಸದುರ್ಗ ತಾ॥. |
| 14 | ಕೃಷಿ ಸಹಕಾರ ಸಂಸ್ಕರಣ ಸಂಘಗಳ ಕ್ಷೇತ್ರ | ಸಾಮಾನ್ಯ | ಹೆಚ್. ಶಿವರುದ್ರಪ್ಪ ಬಿನ್ ಹನುಮಂತಪ್ಪ,ಮಾಚೇನಹಳ್ಳಿ, ಹೊಸದುರ್ಗ ತಾ॥. |

**ಎಂ.ಕೆ. ಶ್ರೀರಂಗಯ್ಯ**
ಜಿಲ್ಲಾಧಿಕಾರಿಗಳು
ಚಿತ್ರದುರ್ಗ ಜಿಲ್ಲೆ

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ8) 50 ಪ್ರತಿಗಳು)

RNI No. KARBIL/2001/47147

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

## ವಿಶೇಷ ರಾಜ್ಯ ಪತ್ರಿಕೆ


| ಭಾಗ– III | ಬೆಂಗಳೂರು, ಸೋಮವಾರ, ಅಕ್ಟೋಬರ್ ೧೯, ೨೦೧೫ (ಆಶ್ವಯುಜ ೨೭, ಶಕ ವರ್ಷ ೧೯೩೭) | ನಂ. ೧೧೨೧ |
|---|---|---|
| Part–III | Bengaluru, Monday, October 19, 2015 (Aashwayuja 27, Shaka Varsha 1937) | No. 1121 |


ಜಿಲ್ಲಾಧಿಕಾರಿಗಳ ಕಾರ್ಯಾಲಯ, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ

ಅಧಿಸೂಚನೆ

**ನಂ. ಚುನಾವಣೆ.ಸಿ.ಆರ್:91–2/2014.15 ದಿನಾಂಕ: 16.10.2015**

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ ಮತ್ತು ಅಭಿವೃದ್ಧಿ) ನಿಯಮಗಳು 1968ರ 7ನೇ ನಿಯಮದ ಚಿತ್ರದುರ್ಗ ಜಿಲ್ಲೆಯ ಹೊಳಲ್ಕೆರೆ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಚುನಾವಣೆ ನಡೆಸಲು ಕಚೇರಿಯ ಚುನಾವಣಾ ನೋಟೀಸು ಪತ್ರದ ನಂ.ಚುನಾವಣೆ.ಸಿ.ಆರ್:91/2014.15 ದಿನಾಂಕ:18.09.2015 ರಲ್ಲಿ ಚುನಾವಣಾ ನೋಟೀಸನ್ನು ನೀಡಿ, ದಿನಾಂಕ:21.09.2015ರಲ್ಲಿ ಪರಿಷ್ಕೃತ ಚುನಾವಣಾ ನೋಟೀಸ್ ಹೊರಡಿಸಲಾಗಿದ್ದು, ದಿನಾಂಕ:14.10.2015ರಂದು ಮತದಾನ ನಡೆದು ಚುನಾವಣಾಧಿಕಾರಿಗಳು ಚುನಾವಣೆಯ ಫಲಿತಾಂಶವನ್ನು ದಿನಾಂಕ:16.10.2015ರಂದು ಘೋಷಿಸಿರುತ್ತಾರೆ. ಪ್ರಯುಕ್ತ ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ 1966ರ ಕಲಂ 27ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ **ಎಂ.ಕೆ.ಶ್ರೀರಂಗಯ್ಯ**, ಜಿಲ್ಲಾಧಿಕಾರಿ, ಚಿತ್ರದುರ್ಗ ಜಿಲ್ಲೆ ಆದ ನಾನು **ಹೊಳಲ್ಕೆರೆ** ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಆಯ್ಕೆಗೊಂಡ ಈ ಕೆಳಕಂಡ ಸದಸ್ಯರ ಹೆಸರುಗಳನ್ನು ಅಧಿಸೂಚಿಸಿರುತ್ತೇನೆ.

| ಕ್ರ.ಸಂ | ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯ ಕ್ಷೇತ್ರದ ಹೆಸರು | ಮೀಸಲಾತಿ ವಿವರ | ಆಯ್ಕೆಗೊಂಡ ಸದಸ್ಯರ ಹೆಸರು & ವಿಳಾಸ ಶ್ರೀ/ಶ್ರೀಮತಿ |
|---|---|---|---|
| 1 | ಭರಮಣ್ಣನಾಯಕನದುರ್ಗ | ಅನುಸೂಚಿತ ಪಂಗಡ | ಓ.ಪುರದಪ್ಪ ಉಡೋಗೆರೆ ಬಿನ್ ಓಬಪ್ಪ, ಉಡೋಗೆರೆ, ಹೊಳಲ್ಕೆರೆ ತಾ॥ |
| 2 | ಹಿರೇಎಮ್ಮಿಗನೂರು | ಹಿಂ.'ಬ' ವರ್ಗ | ಬಿ.ಹೆಚ್.ಪರಮೇಶ್ವರಪ್ಪ ಬಿನ್ ಹನುಮಂತಪ್ಪ, ಅಂತಾಪುರ, ಹೊಳಲ್ಕೆರೆ ತಾ॥ |
| 3 | ಚಿಕ್ಕಜಾಜೂರು | ಮಹಿಳೆ | ಗಿರಿಜಮ್ಮ ಜಯ್ಯಪ್ಪ ಕೋಂ ಜಯರಾಮಪ್ಪ, ಚಿಕ್ಕಜಾಜೂರು, ಹೊಳಲ್ಕೆರೆ ತಾ॥ |
| 4 | ಚಿತ್ರಹಳ್ಳಿ | ಸಾಮಾನ್ಯ | ಅಂಕಳಪ್ಪ ಬಿನ್ ಸಿದ್ದಲಿಂಗಪ್ಪ, ಈಚಘಟ್ಟ, ಹೊಳಲ್ಕೆರೆ ತಾ॥ |
| 5 | ಹೊರಕೆರೆದೇವಪುರ | ಸಾಮಾನ್ಯ | ರಾಮಪ್ಪ ಬಿನ್ ನಾರ್ಶಪ್ಪ, ಕೊಳಾಳ್, ಹೊಳಲ್ಕೆರೆ ತಾ॥ |
| 6 | ತಾಳ್ಯ | ಅನುಸೂಚಿತ ಜಾತಿ | ವಿ.ರಮೇಶ್ ಬಿನ್ ವೀರಪ್ಪ, ದಾಸಯ್ಯನಹಟ್ಟಿ, ಹೊಳಲ್ಕೆರೆ ತಾ॥ |
| 7 | ಹೊಳಲ್ಕೆರೆ | ಸಾಮಾನ್ಯ | ಚಿದಾನಂದಪ್ಪ ಬಿನ್ ಬನ್ನಪ್ಪ, ಗುಂಡೇರಿ, ಹೊಳಲ್ಕೆರೆ ತಾ॥ |
| 8 | ಮಲ್ಲಾಡಿಹಳ್ಳಿ | ಸಾಮಾನ್ಯ | ಪುಣಜೂರುಕುಮಾರಪ್ಪ ಆರ್ ಬಿನ್ ರುದ್ರಪ್ಪ, ಪುಣಜೂರು, ಹೊಳಲ್ಕೆರೆ ತಾ॥ |
| 9 | ತಾಳೀಕಟ್ಟೆ | ಹಿಂ. 'ಅ' ವರ್ಗ | ಎಸ್.ಗೋವಿಂದಪ್ಪ ಬಿನ್ ಸಂಗಪ್ಪ, ತಾಳಿಕಟ್ಟೆ, ಹೊಳಲ್ಕೆರೆ ತಾ॥ |
| 10 | ರಾಮಗಿರಿ | ಸಾಮಾನ್ಯ | ಡಿ.ಬಿ.ಕುಮಾರ ಬಿನ್ ದೇವಿರಪ್ಪ, ಕಂಚಾಪುರ, ಹೊಳಲ್ಕೆರೆ ತಾ॥ |
| 11 | ನಾರಾಯಣಗೊಂಡನಹಳ್ಳಿ | ಸಾಮಾನ್ಯ | ಮಹೇಶ್ವರಪ್ಪ ಬಿನ್ ರಂಗಪ್ಪ, ನವಣೆಕೆರೆ, ಹೊಳಲ್ಕೆರೆ ತಾ॥ |
| 12 | ವರ್ತಕರ ಕ್ಷೇತ್ರ | ಸಾಮಾನ್ಯ | ಬಿ.ರಂಗಸ್ವಾಮಿ ಬಿನ್ ಸಣ್ಣಬಾಲಪ್ಪ, ಹೊಳಲ್ಕೆರೆ ಟೌನ್ |
| 13 | ಸಹಕಾರ ಮಾರುಕಟ್ಟೆ ವ್ಯವಹಾರ ಸಂಘಗಳ ಕ್ಷೇತ್ರ | ಸಾಮಾನ್ಯ | ಎಂ.ಶರತ್ ಕುಮಾರ್ ಪಾಟೀಲ್ ಬಿನ್ ಹೆಚ್.ಎಂ.ಮಹೇಂದ್ರಪ್ಪ, ಶಿವಪುರ, ಹೊಳಲ್ಕೆರೆ ತಾ॥ |

**ಎಂ.ಕೆ. ಶ್ರೀರಂಗಯ್ಯ**
ಜಿಲ್ಲಾಧಿಕಾರಿಗಳು
ಚಿತ್ರದುರ್ಗ ಜಿಲ್ಲೆ

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ೩) ೫೦ ಪ್ರತಿಗಳು)

